## ಬಹುಮುಖ ಕಲಾ ಸಾಧಕ

# ವ್ಹಿ.ಜಿ ಅಂದಾನಿ

ಎಂ.ಫಿಲ್.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರ ಪಡಿಸಿದ ಸಂಶೋಧನ ಪ್ರಬಂಧ

ಸಂಶೋಧಕರು
ಖಾದಿರಸಾಬ.ಇ. ಗುಳೇದಗುಡ್ಡ

ಮಾರ್ಗದರ್ಶಕರು
ಡಾ.ಯಾದಪ್ಪ ಪರದೇಶಿ







ದೃಶ್ಯಕಲಾ ವಿಭಾಗ
ಲಲಿತಕಲಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೧೫

# ಬಹುಮುಖ ಕಲಾ ಸಾಧಕ
# ವ್ಹಿ.ಜಿ ಅಂದಾನಿ

(ಎಂ.ಫಿಲ್.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸುತ್ತಿರುವ ಪ್ರೌಢಪ್ರಬಂಧ)

ಸಂಶೋಧಕರು
ಖಾದಿರಸಾಬ.ಆಯ್.ಗುಳೇದಗುಡ್ಡ

ಮಾರ್ಗದರ್ಶಕರು
ಡಾ.ಯಾದಪ್ಪ ಪರದೇಶಿ
ಸಹಾಯಕ ಪ್ರಾಧ್ಯಾಪಕರು




ದೃಶ್ಯಕಲಾ ವಿಭಾಗ
ಲಲಿತಕಲಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೪

## ಘೋಷಣಾ ಪತ್ರ

**ಬಹುಮುಖ ಕಲಾ ಸಾಧಕ ವ್ಹಿ.ಜಿ ಅಂದಾನಿ** ಎಂಬ ಪ್ರೌಢಪ್ರಬಂಧವನ್ನು **ಡಾ.ಯಾದಪ್ಪ ಪರದೇಶಿ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿದ್ದೇನೆ. ಈ ಪ್ರೌಢಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗ ಎಲ್ಲಿಯೂ ಪ್ರಕಟಗೊಳಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

Khader

**ಖಾದಿರಸಾಬ.ಇ.ಗುಳೆದಗುಡ್ಡ**
ಸಂಶೋಧಕ
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ: ವಿದ್ಯಾರಣ್ಯ
ದಿನಾಂಕ: 20/06/2014

# ಪ್ರಮಾಣ ಪತ್ರ

**ಬಹುಮುಖ ಕಲಾ ಸಾಧಕ ವ್ಹಿ.ಜಿ ಅಂದಾನಿ** ಎಂಬ ಪ್ರೌಢಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್.ಪದವಿಗಾಗಿ **ಖಾದಿರಸಾಬ.ಇ.ಗುಳೇದಗುಡ್ಡ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಪ್ರೌಢಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಡಾ.ಯಾಹಪ್ಪ ಪರದೇಶಿ**
ಮಾರ್ಗದರ್ಶಕರು
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ: ವಿದ್ಯಾರಣ್ಯ
ದಿನಾಂಕ: 20/06/2014

# ದೃಢೀಕರಣಪತ್ರ

**ಖಾದಿರಸಾಬ.ಇ.ಗುಳೆದಗುಡ್ಡ** ಇವರು ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾ ವಿಭಾಗದಲ್ಲಿ ಎಂ.ಫಿಲ್ ಪದವಿಗಾಗಿ ಸಾದರ ಪಡಿಸಿದ ಸಂಶೋಧನ **"ಬಹುಮುಖ ಕಲಾ ಸಾಧಕ ವ್ಹಿ.ಜಿ ಅಂದಾನಿ"** ಸಂಶೋಧನ ಪ್ರಬಂಧ ಡಾ.ಯಾದಪ್ಪ. ಪರದೇಶಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು ಈ ಪ್ರಬಂಧವು ಪರೀಕ್ಷಾ ದೃಷ್ಟಿಯಿಂದ ಯೋಗ್ಯವಾಗಿದೆ ಎಂದು ಈ ಮೂಲಕ ದೃಢೀಕರಿಸಲಾಗಿದೆ.

**ಡಾ.ಕೆ.ರವೀಂದ್ರನಾಥ**
ಮುಖ್ಯಸ್ಥರು
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬

ಸ್ಥಳ: ವಿದ್ಯಾರಣ್ಯ
ದಿನಾಂಕ: ೨೦-೬-೧೮

# ಪರಿವಿಡಿ



ಅಧ್ಯಾಯ –೧

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ

## ಅಧ್ಯಾಯ ೧

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ

### ಪ್ರಸ್ಥಾವನೆ

ನಾಡಿನ ಸಾಂಸ್ಕೃತಿಕ ಬದುಕು ಶ್ರೀಮಂತಗೊಳಿಸುವುದರಲ್ಲಿ ಸಾಮಾಜಿಕ ಬದುಕಿನ ಸಮೃದ್ಧತೆಯಲ್ಲಿ ಕಲಾವಿದರ ಗಮನಾರ್ಹ ಪಾತ್ರವನ್ನು ಅಲ್ಲಗಳೆಯುವಂತಿಲ್ಲ. ಈ ಹಿನ್ನಲೆಯಲ್ಲಿ ಕಲಾಕೃತಿಗಳ ಬಗೆಗಿನ ಅಧ್ಯಯನಗಳು ನಡೆದಂತೆ ಕಲಾಕೃತಿಯನ್ನು ರಚನೆ ಮಾಡಿದ ಕೃತಿಕಾರನ ಕುರಿತಾಗಿಯು ಅಧ್ಯಯನಗಳು ನಡೆಯಬೇಕು. ಆದರೆ ಭಾರತ ಮಾತ್ರವಲ್ಲದೆ ಕರ್ನಾಟಕದ ಸಂದರ್ಭದಲ್ಲಿಯೂ ಕಲಾವಿದರ ಬಗೆಗಿನ ಗಂಭೀರ ಅಧ್ಯಯನಗಳು ತೀರ ಇತ್ತೀಚೆಗೆ ಆರಂಭಗೊಂಡಿವೆ ಎಂದು ಹೇಳಬಹುದು. ಕನ್ನಡದಲ್ಲಿ ಈಗಾಗಲೇ ಕೆಲವು ಕಲಾವಿದರ ಕುರಿತಾಗಿ ಪಿ.ಎಚ್.ಡಿ ಮತ್ತು ಎಂ.ಫಿಲ್ ಅಧ್ಯಯನಗಳು ನಡೆದಿರುವುದನ್ನು ಇಲ್ಲಿ ಗಮನಿಸಬಹುದು. ಇವುಗಳಲ್ಲಿ ಹೆಚ್ಚಿನವುಗಳು ಅವರ ಸಂಕ್ಷಿಪ್ತ ಬದುಕು ಮತ್ತು ಕಲಾಕೃತಿಗಳನ್ನು ಒಳಗೊಂಡಂತೆ ವಿವೇಚಿಸಲ್ಪಟ್ಟಿವೆ. ಇದುವರೆಗೆ ನಡೆದ ಇಂತಹ ಅಧ್ಯಯನಗಳಲ್ಲಿ ಒಬ್ಬೊಬರು ಒಂದೊಂದು ಬಗೆಯ ವಿಶಿಷ್ಠ ಕಲಾ ಶೈಲಿಯಿಂದ ಪ್ರಖ್ಯಾತರಾದವರು. ಕೆಲವರು ಕಲಾಕೃತಿ ರಚನೆಯ ಜೊತೆಗೆ ಕಲಾ ಸಂಸ್ಥೆ ಕಟ್ಟಿ ಬೆಳೆಸುವಲ್ಲಿ, ಕಲಾ ಸಾಹಿತ್ಯ ಮಾಡುವಲ್ಲಿ, ತಮ್ಮನ್ನು ಗುತಿರುಸಿಕೊಂಡವರಾಗಿದ್ದಾರೆ. ಆದರೆ ಇಂತವರು ಕಲಾಕ್ಷೇತ್ರದಲ್ಲಿ ತುಂಬಾ ವಿರಳ. ಈ ಬಗೆಯ ವಿರಳಗುಂಪಿಗೆ ಸೇರಿರುವವರು ವ್ಹಿ.ಜಿ ಅಂದಾನಿ.

ಕಲಾವಿದನೊಬ್ಬನ ಸೃಜನಶೀಲತೆಯಿಂದ ಕಲಾಕೃತಿಗಳ ರಚನೆಯಲ್ಲಿ ವೈವಿಧ್ಯತೆ ಉಂಟಾಗಿ ವಿಶಿಷ್ಠವಾಗಿ ಕಲಾಕೃತಿಗಳು ನಿರ್ಮಾಣವಾಗಬಹುದು. ಅದೇ ಕಲಾವಿದ ತನ್ನ ಸೃಜನಶೀಲ ಮನೋಭಾವವನ್ನು ತನ್ನ ಒಟ್ಟಾರೆ ಬದುಕಿಗೆ ಅಳವಡಿಸಿಕೊಂಡಾಗ ಎಂತಹ ಅದ್ಭುತ ಸೃಷ್ಟಿಸಬಹುದೆಂಬುದಕ್ಕೆ ವ್ಹಿ.ಜಿ ಅಂದಾನಿಯವರು ಉತ್ತಮ ನಿದರ್ಶನ ಎಂದು ಹೇಳಬಹುದು. ಅಂದಾನಿಯವರು ತಮ್ಮ ಕಲಾಕೃತಿ ರಚನೆಯಲ್ಲಿ, ಕಲಾಸಂಸ್ಥೆ ಬೆಳೆಸುವಲ್ಲಿ, ಕಲಾಸಾಹಿತ್ಯ ರಚನೆಯಲ್ಲಿ, ಕಲಾ ಚಿಂತಕರಾಗಿ, ಆಡಳಿತಗಾರರಾಗಿ, ಸಮಕಾಲೀನ ಸಂದರ್ಭಕ್ಕೆ ಬದಲಾಗುವ ವಿಚಾರ ವಾದಿಗಳಾಗಿ ಹೇಗೆ ಸೃಜನಶಿಲತೆಯನ್ನು ಅಳವಡಿಸಿಕೊಂಡರೆಯಂಬುವುದನ್ನು ಮತ್ತು ಕರ್ನಾಟಕ ಕಲಾಕ್ಷೇತ್ರಕ್ಕೆ ಯಾವ ಬಗೆಯ ಅಮೂಲ್ಯ ಕೊಡುಗೆಯನ್ನು ನೀಡಿದರು ಎಂಬುವುದನ್ನು ತಿಳಿದು ಕೊಳ್ಳುವ ಉದ್ದೇಶ ಈ ಅಧ್ಯಯನದಲ್ಲಿದೆ.

## ಅಧ್ಯಯನದ ಉದ್ದೇಶ

ಸಾಂಸ್ಕೃತಿಕ ಮತ್ತು ಕಲಾತ್ಮಕ ಪ್ರಭಾವಗಳು ವ್ಯಕ್ತಿಯೊಬ್ಬನ ಬೆಳವಣಿಗೆಯಲ್ಲಿ ಅಪಾರ ಪರಿಣಾಮ ಉಂಟುಮಾಡುತ್ತದೆ. ಎಂಬುದಕ್ಕೆ. ವ್ಹಿ.ಜಿ ಅಂದಾನಿಯವರ ಬದುಕೇ ಸಾಕ್ಷಿ. ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು, ಮುಸ್ಲಿಂ ಸುಲ್ತಾನರ ಆಡಳಿತ ಮತ್ತು ಕಲಾ ಪ್ರಭಾವ ಹೊಂದಿದ ಗುಲಬರ್ಗಾ ಪ್ರದೇಶವು ಒಂದು ಕಲಾ ವೈವಿಧ್ಯತೆಯ ನಾಡು. ಅಲ್ಲದೇ ಅಂದಾನಿಯವರು ಜನ್ಮತಳೆದ ಹೊನ್ನಕಿರಣಗಿ ಗ್ರಾಮವು ಜನಪದ ಕಲೆಗಳ ಬೀಡು. ಇಂತಹ ಕಲಾ ವಾತಾವರಣವು ವ್ಹಿ.ಜಿ ಅಂದಾನಿಯವರ ಮೇಲೆ ಎಂತಹ ಪರಿಣಾಮ ಬೀರಿತು. ತಮ್ಮ ಮೂಲ ಸಂಸ್ಕೃತಿಯ ಹಿನ್ನಲೆ, ಸ್ಥಳೀಯ ಅಂಶಗಳನ್ನು ಉಳಿಸಿಕೊಂಡು ಆಧುನಿಕತೆ ಮತ್ತು ಸಮಕಾಲೀನ ಸಂದರ್ಭಕ್ಕೆ ತಮ್ಮನ್ನು ಹೇಗೆ ತೆರೆದುಕೊಂಡರು ಎಂಬಂತಹ ಸಂಗತಿಗಳನ್ನು ವಿವೇಚಿಸುವ ಪ್ರಯತ್ನವು ಈ ಅಧ್ಯಯನದಲ್ಲಿದೆ.

ಅಂದಾನಿಯವರು ಬಾಲ್ಯದ ದಿನಗಳಿಂದಲೂ ಕಲೆಯ ಕಡೆಗೆ ಆಕರ್ಷಿತರಾದವರು. ತಮ್ಮ ಹಳ್ಳಿಯ ಹಬ್ಬ ಹರಿದಿನ, ಜಾತ್ರೆ, ಉತ್ಸವಗಳ ಸಂದರ್ಭದಲ್ಲಿ ಗ್ರಾಮೀಣರು ರಚಿಸುತ್ತಿದ್ದ ಜನಪದ ಶಿಲ್ಪಕಲೆಗಳು ಇವರ ಮನಸ್ಸನ್ನು ಆಕರ್ಷಿಸಿದ್ದವು. ಮನೆಯ ಎದುರಿಗಿದ್ದ ಕುಂಬಾರನು ಮಾಡುತ್ತಿದ್ದ ಮಣ್ಣಿನ ಗಡಿಗೆಯ ತಯಾರಿಕೆಯನ್ನು ಏಕಾಗ್ರತೆಯಿಂದ ನೋಡುತ್ತಿದ್ದ ಇವರು ಮುಂದೆ ಟೆರಾಕೊಟ್ಟ ಶಿಲ್ಪ ತಯಾಲಿಕೆಯಲ್ಲೂ ಹೆಸರು ಮಾಡಿದರು.

ಪ್ರಾಥಮಿಕ ಶಾಲಾ ಹಂತದಲ್ಲಿ ಅದಕ್ಕೆ ಮತ್ತಷ್ಟು ಇಂಬು ನೀಡುವ ಘಟನಾವಳಿಗಳು ನಡೆದವು. ಪ್ರೌಢಶಾಲಾ ಹಂತಕ್ಕೆ ಬರುವಷ್ಟರಲ್ಲಿ ಅವರ ಆಂತರಿಕ ಮನಸ್ಸು ಕಲಾವಿದನಾಗಲು ಅದಾಗಲೇ ನಿರ್ಧರಿಸಿಯಾಗಿತ್ತು. ಇದಕ್ಕೆ ಅಲ್ಲಿನ ಕಲಾ ಶಿಕ್ಷಕರು ಹೆಚ್ಚಿನ ಪ್ರೋತ್ಸಾಹ ನೀಡಿದರು. ಹೀಗೆ ಅವರ ಬಾಲ್ಯದಿಂದ ಪ್ರೌಢ ಶಾಲಾ ಹಂತದವರೆಗೆ ಯಾವ ಪ್ರಭಾವಗಳು ಅವರನ್ನು ಕಲಾ ಕ್ಷೇತ್ರಕ್ಕೆ ಎಳೆತಂದವು, ಯಾರು ಮತ್ತು ಯಾವುದು ಹೆಚ್ಚಿನ ಪ್ರಭಾವ ಬೀರಿತು ಎಂಬಂತಹ ಸಂಗತಿಗಳನ್ನು ತಿಳಿದುಕೊಳ್ಳುವ ಉದೇಶದಿಂದ ಈ ಅಧ್ಯಯನ ಕೈಗೊಳ್ಳಲಾಗಿದೆ.

ವ್ಹಿ.ಜಿ ಅಂದಾನಿಯವರು ತಮ್ಮ ಕಲಾಶಿಕ್ಷಣವನ್ನು ಗುಲಬರ್ಗಾದಲ್ಲಿ ಪಡೆದುಕೊಳ್ಳಲು ಆರಂಭಿಸಿದರು. ಮುಂಬಯಿಯ ಜೆ.ಜೆ ಕಲಾಶಾಲೆಯಲ್ಲಿ ಕಲಿತುಬಂದ ಜೆ.ಎಸ್ ಖಂಡೇರಾವ್, ಎ.ಎಸ್. ಪಾಟೀಲ, ಅಂದಾನಿಯವರ ಶಿಕ್ಷಕರಾಗಿದ್ದರು. ಇವರಲ್ಲದೆ ಶಿವಾ ಮುನೊಳ್ಳಿ ಇನ್ನಿತರರು ಇವರ ಕಲಾಶಿಕ್ಷಣದಲ್ಲಿ ಪರೋಕ್ಷವಾಗಿ ಪ್ರಭಾವ ಬೀರಿದರು. ಮುಂದಿನ ದಿನಗಗಳಲ್ಲಿ ಬನಸ್ಥಳೀಯ ವಿದ್ಯಾಪೀಠದಲ್ಲಿ ಭಿತ್ತಿಚಿತ್ರ ರಚನಾ ತರಬೇತಿ, ಅಲ್ಲಿ ಶಿಕ್ಷಕರು, ಕಲಾವಾತಾವರಣ ಇವೆಲ್ಲ ಯಾವ ರೀತಿ ಪ್ರೇರಣೆ ನೀಡಿದವು ಎಂಬಂತಹ ಸಂಗತಿಗಳನ್ನು ಈ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ.

ಅಂದಾನಿಯವರು ಕಲಾಶಿಕ್ಷಣ ಪೂರೈಸಿದ ನಂತರ ಗ್ರೀನೋಬಲ್ಸ್ ಎಂಬ ಮುದ್ರಣಾಲಯದಲ್ಲಿ ಕೆಲಸ ನಿರ್ವಹಿಸತೊಡಗಿದರು. ಕೆಲವು ದಿನಗಳ ನಂತರ ತಾವು ಕಲಾ ಶಿಕ್ಷಣ ಪೂರೈಸಿದ ನಂತರ

'ದಿ ಐಡಿಯಲ್ ಫೈನ್ ಆರ್ಟ್' ಕಲಾಶಾಲೆಯ ಜವಾಬ್ದಾರಿಯು ಇವರ ಹೆಗಲೇರಿತು. ಕಾರಣ ಈ ಕಲಾಶಾಲೆಯನ್ನು ಸ್ಥಾಪಿಸಿ ಪ್ರಾಚಾರ್ಯರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಜೆ.ಎಸ್ ಖಂಡೇರಾವ್ ಅವರು ಶರಣಬಸವೇಶ್ವರ  ಸಂಸ್ಥಾನ ಮಠದ ಕಲಾ ಕಾಲೇಜಿನಲ್ಲಿ ಶಿಕ್ಷಕರಾಗಿ ನಿಯುಕ್ತಿಗೊಂಡರು. ಇದರಿಂದಾಗಿ ಮೊದಲೇ ಆರ್ಥಿಕ ಸಂಕಷ್ಟ ಎದುರಿಸುತ್ತಿದ್ದ ಕಲಾಶಾಲೆಯನ್ನು ನೊಡಿಕೊಳ್ಳಲು ಇವರಿಗೆ ಅಸಾಧ್ಯವಾಯಿತು. ಹಾಗಾಗಿ ಅದನ್ನು ಯಶಸ್ವಿಯಾಗಿ ಮುನ್ನಡೆಸುವ ಗುರುತರ ಜವಾಬ್ದಾರಿಯನ್ನು ತಮ್ಮ ಶಿಷ್ಯರಲ್ಲೇ ಒಬ್ಬರಿಗೆ ವಹಿಸಲು ನಿರ್ಧರಿಸಿದರು. ಇದಕ್ಕೆ ವ್ಹಿ.ಜಿ ಅಂದಾನಿಯವರೇ ಸೂಕ್ತ ವ್ಯಕ್ತಿ ಎಂದು ಅರಿತು ಜವಾಬ್ದಾರಿಯನ್ನು ವಹಿಸಿದರು.

ಅಂದಾನಿಯವರು ಮುದ್ರಣಾಲಯದಲ್ಲಿ ಕೆಲಸ ನಿರ್ವಹಿಸುತ್ತಲೇ 'ದಿ ಐಡಿಯಲ್' ಕಲಾಶಾಲೆಯ ಜವಾಬ್ದಾರಿಯನ್ನು ಹೊತ್ತುಕೊಂಡರು. ಅಂದಾನಿಯವರ ನೇತೃತ್ವದಲ್ಲಿ ಕಲಾಶಾಲೆ ಅತ್ಯಂತ ಶೀಘ್ರವಾಗಿ ಬೆಳವಣಿಗೆ ಹೊಂದತೊಡಗಿತು. ಕಲಾಶಾಲೆಯ ಬೆಳವಣಿಗೆಗೆ ತಮ್ಮ ಜೀವನವನ್ನೇ ಮುಡಿಪಾಗಿಟ್ಟರು. ಕೆಲದಿನಗಳಲ್ಲಿ ಗ್ರಿನೋಬಲ್ಸ್ ಮುದ್ರಣಾಲಯದ ಕೆಲಸವನ್ನು ತೊರೆದರು. ಕಲಾಶಾಲೆಯಲ್ಲಿ ವಿವಿಧ ಕೋರ್ಸುಗಳು, ತರಬೇತಿ ವರ್ಗಗಳು, ಕಲಾಚರ್ಚೆ, ಶಿಬಿರ, ಪ್ರದರ್ಶನ, ಕಾರ್ಯಾಗಾರ, ಪ್ರಾತ್ಯಕ್ಷಿಕೆ, ಉಪಾನ್ಯಾಸಗಳು, ಇನ್ನಿತರ ಪೂರಕವಾದ ಸಾಂಸ್ಕೃತಿಕ ಚಟುವಟಿಕೆಗಳನ್ನು ನಡೆಸುವ ಮೂಲಕ ಅದರ ಕೀರ್ತಿಯನ್ನು ರಾಜ್ಯ, ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಟ್ಟಕ್ಕೆ ಎತ್ತರಿಸಿದರು. ಬಾಡಿಗೆಯ ಕಟ್ಟಡದಲ್ಲಿ ನಡೆಯುತ್ತಿದ್ದ ಕಲಾ ಶಾಲೆಗೆ ಸ್ವಂತ ಕಟ್ಟಡ ಒದಗಿಸಿದ್ದು ಮಾತ್ರವಲ್ಲದೇ ಇಂದು ಸ್ನಾತಕೋತ್ತರ ಹಂತವರೆಗೆ ಕಲಾಶಿಕ್ಷಣ ನಡೆಯುವಂತೆ ಮಾಡುವಲ್ಲಿ ಅವರ ಶ್ರಮ, ತ್ಯಾಗ, ದೂರದೃಷ್ಠಿ, ಸೃಜನಶೀಲತೆಗಳ ಪಾತ್ರ ಅತ್ಯಂತ ಮಹತ್ವದಾಗಿರುತ್ತದೆ. ಕಲಾ ಶಾಲೆಯನ್ನು ಹೇಗೆ ಬೆಳೆಸಿದರು, ಅದಕ್ಕಾಗಿ ಯಾವ ನಿಯಮಗಳನ್ನು ಕೈಗೊಂಡರು, ಎಂತಹ ಕಠಿಣ ಸಂದರ್ಭಗಳನ್ನು ಎದುರಿಸಿದರು, ವಿದ್ಯಾರ್ಥಿಗಳ ಅಭಿವೃದ್ಧಿಯ ಹಿನ್ನೆಲೆಯಲ್ಲಿ ಕಲಾಶಾಲೆ ಮತ್ತು ಅಂದಾನಿಯವರು ನಿರ್ವಹಿಸಿದ ಪಾತ್ರಗಳೇನು ಎಂಬರಿತಹ ಸಂಗತಿಗಳನ್ನು ವಿವೇಚಿಸುವ ಉದ್ದೇಶ ಪ್ರಸ್ತುತ ಅಧ್ಯಯನದಲ್ಲಿದೆ.

ಅಂದಾನಿಯವರು ಕಲಾ ಬದುಕಿನುದ್ದಕ್ಕೂ ಹಲವಾರು ಬಗೆಯ ಕಲಾಕೃತಿಗಳನ್ನು ರಚಿಸುತ್ತಾ ಬಂದಿದ್ದಾರೆ. ಬಾಲ್ಯದ ದಿನಗಳಲ್ಲಿ, ಪ್ರಾಥಮಿಕ ಶಿಕ್ಷಣದಲ್ಲಿ, ಪ್ರೌಢ ಶಿಕ್ಷಣದಲ್ಲಿ, ಕಲಾ ಶಿಕ್ಷಣ ಹಂತದಲ್ಲಿ ಮತ್ತು ಕಲಾ ಅಧ್ಯಾಪನ ಹಂತಗಳಲ್ಲಿ ಇವರಿಂದ ವಿಭಿನ್ನ ಬಗೆಯ ಕಲಾಕೃತಿಗಳು ಮೂಡಿಬಂದಿವೆ. ರೇಖಾಚಿತ್ರಗಳಿಗೆ ಹೆಚ್ಚಿನ ಆದ್ಯತೆ ಕೊಡುವ ಅಂದಾನಿಯವರು ತಮ್ಮ ಕಲಾಬದುಕಿನಲ್ಲಿ ಗೂಳಿಸರಣಿ, ಬಿಸಿಲು ನೆರಳಿನ ಚರ್ಚೆ, ಪ್ರಾಚಿನ ಸ್ಮಾರಕಗಳ ಸರಣಿ, ಸ್ಥೂಲ ಕಾಯದ ಮಹಿಳೆಯರ ಸರಣಿ, ನನ್ನ ಬಾಲ್ಯ ಸರಣಿ, ನಿಸರ್ಗ ಸರಣಿ, ಭಾವಚಿತ್ರ ಸರಣಿ, ಭಿತ್ತಿ ಚಿತ್ರಗಳು, ಹೀಗೆ ಅನೇಕ ವಿಷಯಗಳಿಗೆ ಸಂಬಂಧಿಸಿದಂತೆ ಸರಣಿ ಚಿತ್ರಗಳನ್ನು ರಚನೆಮಾಡಿದ್ದಾರೆ. ಇವೆಲ್ಲವುಗಳನ್ನು ವಿಷಯಾನುಸಾರ ಮತ್ತು ಮಾಧ್ಯಮಗಳಿಗನುಸಾರವಾಗಿ ವಿಂಗಡಿಸಿಕೊಂಡು ವಿಶ್ಲೇಷಣೆ ಮಾಡುವ ಮಹತ್ವದ ಉದ್ದೇಶವನ್ನು ಈ ಅಧ್ಯಯನ ಹೊಂದಿದೆ.

ವ್ಹಿ.ಜಿ ಅಂದಾನಿಯವರು ತಮ್ಮ ಕಲಾ ಬದುಕಿನುದ್ದಕ್ಕೂ ವಿವಿಧ ರೀತಿಯ ಪ್ರೇರಣೆಗಳಿಗೆ ಒಳಗಾಗಿ ಕಲಾಕೃತಿಗಳನ್ನು ರಚಿಸಿರುವುದು ಕಂಡುಬರುತ್ತದೆ. ಬಾಲ್ಯದ ದಿನಗಳಲ್ಲಿ ಹಳ್ಳಿಯ ಪರಿಸರ, ತಂದೆ ತಾಯಿಗಳು ಮನೆಯಲ್ಲಿ ನಿರ್ವಹಿಸುತ್ತಿದ್ದ ಕಲಾ ಚಟುವಟಿಕೆಗಳಿಂದ ಪ್ರೇರಣೆ ಪಡೆದುಕೊಂಡಿದ್ದನ್ನು ತಿಳಿಸುತ್ತಾರೆ. ಅಲ್ಲದೆ ಸ್ಥಳೀಯ ಐತಿಹಾಸಿಕ ಮಹತ್ವದ ಶಾಸನಗಳು, ವೀರಗಲ್ಲು, ಮಾಸ್ತಿಕಲ್ಲು, ಕೋಟೆ, ಕೊತ್ತಲುಗಳು, ಮನೆ ಮಠ, ದೇವಾಲಯಗಳು, ಮಸೀದಿ, ಚರ್ಚುಗಳು ಹಾಗೂ ಇನ್ನಿತರ ಪ್ರಾಚೀನ ಸ್ಮಾರಕಗಳಿಂದ ಅಂದಾನಿಯವರ ಕಲಾ ಪ್ರೇರಣೆ ಉಜ್ವಲತೆಯನ್ನು ಕಂಡಿದೆ. ಮುಂದಿನ ಹಂತಗಳಲ್ಲಿ ವೈಜ್ಞಾನಿಕ ಆವಿಷ್ಕಾರಗಳಾದ ಮುದ್ರಣಯಂತ್ರ, ಬೆರಳಚ್ಚು ಯಂತ್ರ, ಚಲನಚಿತ್ರ, ಸೈಕಲ್ಲು, ದೂರದರ್ಶನ, ರೈಲುಗಾಡಿಗಳಂತಹ ವಸ್ತುಗಳ ಪ್ರೇರಣೆ ಇವರ ಕಲಾಕೃತಿಗಳಲ್ಲಿದೆ. ಅದೇ ರೀತಿ ಕಲಾ ಪ್ರವಾಸ ಸಂದರ್ಭದಲ್ಲಿ ಅಜಂತಾ, ಎಲ್ಲೋರಾ, ದೆಹಲಿ, ಬರೋಡಾ, ಶಾಂತಿನಿಕೇತನಾ, ಮುಂಬೈ ಮುಂತಾದ ಹಲವಾರು ಸ್ಥಳಗಳಲ್ಲದೇ ವಿದೇಶಗಳ ಪ್ರಮುಖ ಸ್ಥಳಗಳು ಇವರ ಕಲಾಪ್ರೇರಣೆಯ ವಸ್ತುಗಳಾಗಿವೆ. ಹೀಗೆ ಅಂದಾನಿಯವರ ಕಲಾರಚನೆಯ ಹಿಂದಿರುವ ಪ್ರೇರಣೆಯನ್ನು ವಿವೇಚಿಸುವ ಪ್ರಯತ್ನ ಈ ಅಧ್ಯಯನದಲ್ಲಿದೆ.

ಅಂದಾನಿಯವರು ತಮ್ಮ ಕಲಾಬದುಕಿನಲ್ಲಿ ಹಲವಾರು ಕಲಾವಿದರಿಂದ ಮತ್ತು ಕಲಾಕೃತಿಗಳಿಂದ ಪ್ರಭಾವಿತರಾಗಿದ್ದಾರೆ. ಬಾಲ್ಯದಲ್ಲಿ ಮಣ್ಣಿನ ಕಲಾತ್ಮಕ ಪಾತ್ರೆಗಳನ್ನು ಮಾರುತ್ತಿದ್ದ ಕುಂಬಾರನಿಂದ ಪ್ರಭಾವಿತನಾದರೆ ನಂತರ ಪ್ರಾಥಮಿಕ ಶಾಲೆಯ ಶಿಕ್ಷಕರು, ಪ್ರೌಢಶಾಲೆಯ ಕಲಾಶಿಕ್ಷಕರು, ಕಾಲೇಜು ಹಂತದ ಶಿಕ್ಷಕರು, ಕಲಾಶಿಕ್ಷಣದ ಹಂತದ ಶಿಕ್ಷಕರು ಹೀಗೆ ಹಲವರಿಂದ ಇವರು ಪ್ರಭಾವಿತರಾಗಿದ್ದಾರೆ. ಇದಲ್ಲದೇ ದೇಶ ಮತ್ತು ವಿದೇಶಗಳ ಪ್ರಮುಖ ಕಲಾವಿದರಾದ ಅಲಮೇಲಕರ್, ರುಮಾಲೆ ಚನ್ನಬಸವಯ್ಯ, ವಿನ್ಸೆಂಟ್ ವ್ಯಾನ್‌ಗಾಗ್, ಪಾಬ್ಲೋ ಪಿಕಾಸೋ, ಹೆನ್ರಿಮಾಟಿಸ್ ರಂತಹವರು ಇವರ ಕಲಾಬದುಕಿನ ಮೇಲೆ ಮತ್ತು ಕಲಾಕೃತಿ ರಚನೆಯ ಮೇಲೆ ಪ್ರಭಾವ ಬೀರಿದ್ದಾರೆ. ಹೀಗೆ ಅಂದಾನಿಯವರ ಕಲಾ ಪ್ರಭಾವವನ್ನು ಹಂತ ಹಂತವಾಗಿ ವಿವೇಚಿಸುವ ಉದ್ದೇಶವನ್ನು ಈ ಅಧ್ಯಯನದಲ್ಲಿ ಹೊಂದಲಾಗಿದೆ.

ಅಂದಾನಿಯವರ ಕಲಾ ಶೈಲಿ ವಿಶಿಷ್ಟವಾದುದು. ಅದು ಇಂದಿನ ಪಕ್ವತೆಯ ಹಂತಕ್ಕೆ ಬರಲು ಅದರ ಹಿಂದೆ ಸಾಕಷ್ಟು ಪರಿಶ್ರಮವಿದೆ. ಯಾವುದೇ ಕಲಾವಿದ ತನ್ನದೇ ಆದ ವಿಶಿಷ್ಟ ಶೈಲಿ ಕಂಡುಕೊಳ್ಳುವುದಕ್ಕಿಂತ ಪೂರ್ವದಲ್ಲಿ ಹಲವಾರು ಶೈಲಿಗಳ ಬಗ್ಗೆ ಪ್ರಯೋಗ ಮಾಡಿರುತ್ತಾನೆ. ಅನುಕರಣೆ, ನೈಜತೆ, ಸೃಜನಶೀಲತೆ, ಜನಪ್ರಿಯತೆಯಂತಹ ಘಟ್ಟಗಳನ್ನು ದಾಟಿಕೊಂಡು ತನ್ನತನವನ್ನು ಗುರುತಿಸಿಕೊಂಡಿರುತ್ತಾನೆ. ಈ ಹಿನ್ನೆಲೆಯಲ್ಲಿ ಅಂದಾನಿಯವರು ಬಾಲ್ಯದಿಂದ ಇಂದಿನವರೆಗೆ ಯಾವ ಯಾವ ಶೈಲಿಗಳಲ್ಲಿ ಚಿತ್ರರಚನೆ ಮಾಡಿದರು, ಇಂದು ಯಾವ ಶೈಲಿಯಲ್ಲಿ ಚಿತ್ರಿಸುತ್ತಿದ್ದಾರೆ. ಅವರು ಅನುಸರಿಸುತ್ತಿರುವ ಕಲಾಶೈಲಿಯ ವಿಶೇಷತೆಗಳೇನು ಎಂಬಂತಹ ಅಂಶಗಳನ್ನು ಚರ್ಚಿಸುವ ಉದ್ದೇಶವು ಈ ಅಧ್ಯಯನದಲ್ಲಿದೆ.

ವ್ಹಿ.ಜಿ. ಅಂದಾನಿಯವರು ತಮ್ಮ ಕಲಾಬದುಕಿನುದ್ದಕ್ಕೂ ವಿವಿಧ ಬಗೆಯ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡವರು. ಕಲಾಶಾಲೆಯನ್ನು ಪೋಷಿಸಿ ಬೆಳೆಸುವುದರ ಜೊತೆಗೆ ಕಲಾಕೃತಿ ರಚನೆ, ಕಲಾ ಉಪನ್ಯಾಸ, ಕಲಾಪ್ರಾತ್ಯಕ್ಷಿಕೆ, ಚರ್ಚೆ, ಶಿಬಿರ, ಪ್ರದರ್ಶನಗಳಲ್ಲಿ ನಿರಂತರವಾಗಿ ಪಾಲ್ಗೊಳ್ಳುತ್ತಾ ತಮ್ಮ ಕಲಾಶಾಲೆಯಲ್ಲೂ ಅವುಗಳನ್ನು ಏರ್ಪಡಿಸುವ ಮೂಲಕ ಕ್ರಿಯಾಶೀಲತೆಯನ್ನು ಜೀವಂತವಾಗಿರಿಸಿದವರು. ಜೊತೆಗೆ ಕಲಾಸಾಹಿತ್ಯ ರಚನೆ, ವಿವಿಧ ಅಕಾಡೆಮಿಗಳ ಸದಸ್ಯತ್ವ, ಅಧ್ಯಕ್ಷತೆ, ಸಂಘ–ಸಂಸ್ಥೆಗಳ ಸದಸ್ಯರಾಗಿ ಪೂರಕ ಚಟುವಟಿಕೆಗಳಲ್ಲೂ ತಮ್ಮನ್ನು ತೊಡಗಿಸಿಕೊಂಡವರು. ಹೀಗೆ ಅವರ ಕಲಾಬದುಕಿನ ಪ್ರಮುಖ ಕಲಾಚಟುವಟಿಕೆಗಳನ್ನು ವಿವೇಚಿಸುವ ಪ್ರಯತ್ನ ಈ ಅಧ್ಯಯನದಲ್ಲಿದೆ. ಇದಲ್ಲದೇ ಅಂದಾನಿಯವರು ಕಲಾ ಕ್ಷೇತ್ರಕ್ಕೆ ಸಲ್ಲಿಸಿದ ಅನುಪಮ ಸೇವೆಯನ್ನು ಪರಿಗಣಿಸಿ ಅನೇಕ ಸಂಘ–ಸಂಸ್ಥೆಗಳು, ಸರಕಾರ, ವಿಶ್ವವಿದ್ಯಾಲಯಗಳು, ಸಾರ್ವಜನಿಕರು ಇವರಿಗೆ ಉನ್ನತ ಸ್ಥಾನಮಾನ ಮತ್ತು ಪ್ರಶಸ್ತಿ ಗೌರವಗಳನ್ನು ನೀಡಿ ಆಧರಿಸಿವೆ. ಅವೆಲ್ಲವುಗಳನ್ನು ಅಧ್ಯಯನದ ವ್ಯಾಪ್ತಿಗೆ ತಂದುಕೊಳ್ಳುವ ಉದ್ದೇಶವನ್ನು ಇಲ್ಲಿ ಹೊಂದಲಾಗಿದೆ.

ಈ ರೀತಿ ಕಲಾಕ್ಷೇತ್ರದಲ್ಲಿ ಅದ್ವಿತೀಯ ಸಾಧನೆಯಿಂದಾಗಿ ಕರ್ನಾಟಕ ಮಾತ್ರವಲ್ಲದೇ ರಾಷ್ಟ್ರಮಟ್ಟದಲ್ಲಿ ತಮ್ಮನ್ನು ಗುರುತಿಸಿಕೊಂಡಿರುವ ವ್ಹಿ.ಜಿ. ಅಂದಾನಿಯವರ ಕುರಿತಾಗಿ ಇದುವರೆಗೆ ಚಿಕ್ಕ ಪುಟ್ಟ ಬರವಣಿಗೆಗಳು ಮಾತ್ರ ಬಂದಿವೆ. ದಿನಪತ್ರಿಕೆ, ಮಾಸಪತ್ರಿಕೆ, ಸ್ಮರಣ ಸಂಚಿಕೆಗಳಲ್ಲಿನ ಪರಿಚಯ ಲೇಖನಗಳನ್ನು ಹೊರತುಪಡಿಸಿದರೆ, ಇವರ ಕುರಿತಾಗಿ ಬಂದಿರುವ ಪುಸ್ತಕ ರೂಪದ ಅಧ್ಯಯನಗಳು ತೀರಾ ಕಡಿಮೆ ಅಥವಾ ಇಲ್ಲವೆಂದೇ ಹೇಳಬಹುದು. ಇವುಗಳ ನಡುವೆ 'ಕಲಾವಿದ ಅಂದಾನಿ ಐವತ್ತು'[೧] ಎಂಬ ಸ್ಮರಣ ಸಂಚಿಕೆಯಲ್ಲಿ ಅವರ ಗೆಳೆಯರ ಬಳಗವು ೧೯ ಲೇಖನಗಳನ್ನು ಪ್ರಕಟಿಸಿದ್ದಾರೆ. ಇವುಗಳನ್ನು ನಾಡಿನ ಖ್ಯಾತ ವಿದ್ವಾಂಸರು ಮತ್ತು ಬರಹಗಾರರಲ್ಲದೇ ವಿದೇಶಗಳ ತಜ್ಞರು ಬರೆದಿರುವುದು ವಿಶೇಷ. ಇದರಲ್ಲಿ ಪಾಟೀಲ ಪುಟ್ಟಪ್ಪ, ಡಾ.ವೀರಣ್ಣ ದಂಡೆ, ಚಂದ್ರಕಾಂತ ಕುಸನೂರ, ಕೆ.ವಿ.ಸುಬ್ರಹ್ಮಣ್ಯಂ, ಗವೀಶ ಹಿರೇಮಠ, ಆರ್.ಕೆ. ಹುಡುಗಿ, ಎಸ್.ರಾಮನ್, ಯೂಸೂಫ್ ಅರಕ್ಕಲ್, ಮಾರ್ಥಾಕಾರ್ಲೆ, ರಿನೋರಾವ್ ಅವರನ್ನೊಳಗೊಂಡಂತೆ ೧೯ ಜನರ ಲೇಖನಗಳಿವೆ. ಇವೆಲ್ಲ ಅಂದಾನಿಯವರು ಕಲೆ, ಬದುಕು ಮತ್ತು ವ್ಯಕ್ತಿತ್ವಗಳನ್ನು ಕಟ್ಟಿಕೊಡುತ್ತವೆ.

ಕರ್ನಾಟಕ ರಾಜ್ಯ ಲಲಿತಕಲಾ ಅಕಾಡೆಮಿಯ ನಾಡಿನ ಕಲಾವಿದರ ಕಲೆ ಮತ್ತು ಬದುಕನ್ನು ಪರಿಚಯಿಸುವ ಕಿರು ಪುಸ್ತಕಗಳನ್ನು ಪ್ರಕಟಿಸುತ್ತಿದ್ದು, ಅಂದಾನಿಯವರ ಬಗ್ಗೆ ೨೦೦೪ರಲ್ಲಿ ಪುಸ್ತಕ ಪ್ರಕಟವಾಗಿದೆ.[೨] ಇದನ್ನು ಡಾ.ಶಿವಾನಂದ.ಎಚ್.ಬಂಟನೂರ ಅವರು ಬರೆದಿದ್ದಾರೆ. ಮುಂದೆ ಶಿವಾಂದ ಎಚ್ ಬಂಟನೂರ ಮತ್ತು ಕ.ವಿ.ಸುಬ್ರಮಣ್ಯಂ ಅವರು ಬರೆದ ಲೇಖನಗಳು ಅಂದಾನಿಯವರ ಸಂಪಾದತ್ವದಲ್ಲಿ 'ಬಯಲು ಬಯಲಾದ ರೇಖೆಗಳು'[೩] ಎಂಬ ಶೀರ್ಷಿಕೆಯಲ್ಲಿ ೨೦೦೬ರಲ್ಲಿ ಪುಸ್ತಕ ಪ್ರಕಟಿಸಿದ್ದು, ಇದರಲ್ಲಿ ಅಂದಾನಿಯವರ ರೇಖಾಚಿತ್ರಗಳ ಬಗ್ಗೆ ವಿವೇಚಿಸಲಾಗಿದೆ.

ಈ ಮೇಲಿನ ವಿವರಗಳನ್ನು ಗಮನಿಸಿದಾಗ ಅಂದಾನಿಯವರು ಬಗ್ಗೆ ಗಂಭೀರ ಸ್ವರೂಪದ ಅಧ್ಯಯನಗಳು ನಡೆಯದೇ ಇರುವುದು ಆಶ್ಚರ್ಯವನ್ನುಂಟು ಮಾಡುತ್ತದೆ. ಈ ಕೊರತೆಯನ್ನು ತುಂಬಿಕೊಡುವ ಕಿರುಪ್ರಯತ್ನವಾಗಿದೆ ಪ್ರಸ್ತುತ ಈ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.

## ಅಧಯ್ಯನದ ಸ್ವರೂಪ

ವ್ಹಿ.ಜಿ ಅಂದಾನಿಯವರ ಕುರಿತಾಗಿರುವ ಪ್ರಸ್ತುತ ಪ್ರಂಬಂಧವನ್ನು ಅನುಕೂಲತೆಯ ದೃಷ್ಟಿಯಿಂದ ಏಳು ಅಧ್ಯಯಗಳಲ್ಲಿ ವಿಂಗಡಿಸಿ ವಿಶ್ಲೇಷಿಸಲಾಗಿದೆ. ಪ್ರತಿಯೊಂದು ಅಧ್ಯಯಗಳಲ್ಲಿ ನಿರೂಪಿಸಲಾಗಿದ ಸಂಗತಿಗಳ ಸಂಕ್ಷಿಪ್ತ ಸ್ವರೂಪವು ಕೆಳಗಿನಂತಿದೆ.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವಿಧಾನ ಮತ್ತು ವ್ಯಾಪ್ತಿಗಳ ಕುರಿತಾಗಿ ಹೇಳಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಗುಲಬರ್ಗಾ ಪ್ರದೇಶದ ಸಾಂಸ್ಕೃತಿಕ ಪರಿಸರದ ಹಿನ್ನೆಲೆಯೊಂದಿಗೆ ಅಂದಾನಿಯವರ ಬಾಲ್ಯ ಜೀವನ ಪ್ರಾಥಮಿಕ, ಪ್ರೌಢ, ಮತ್ತು ಕಲಾಶಿಕ್ಷಣ ಒಳಗೊಂಡಂತೆ ಅವರ ಶೈಕ್ಷಣಿಕ ಜೀವನದ ಕುರಿತು ವಿವರಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಅಂದಾನಿಯವರ ಕಲಾಬದುಕು ಮತ್ತು ಐಡಿಯಲ್ ಫೈನ್ ಆರ್ಟ್ ಕಲಾ ಸಂಸ್ಥೆಯ ಬೆಳವಣಿಗೆಗಳನ್ನು ಸಮೀಕರಿಸಿ ಹೇಳುವ ಪ್ರಯತ್ನ ಮಾಡಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಅಂದಾನಿಯವರ ಒಟ್ಟು ಕಲಾಕೃತಿಗಳನ್ನು ವಿಷಯಾನುಸಾರ ಮತ್ತು ಮಾಧ್ಯಮಗಳಿಗನುಸಾರವಾಗಿ ವಿಂಗಡಿಸಿಕೊಂಡು ವಿಶ್ಲೇಷಿಸಿರುವ ಪ್ರಯತ್ನವಿದೆ.

ಐದನೆಯ ಅಧ್ಯಾಯದಲ್ಲಿ ಅಂದಾನಿಯವರ ಕಲಾಶೈಲಿ, ಪ್ರಭಾವ, ಮತ್ತು ಪ್ರೇರಣೆಗಳ ಕುರಿತಾಗಿ ತಿಳಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ ಅಂದಾನಿಯವರ ಕಲಾ ಬದುಕಿನ ಒಟ್ಟಾರೆ ಕಲಾ ಚಟುವಟಿಕೆಗಳು ಮತ್ತು ಪೂರಕ ಸಾಂಸ್ಕೃತಿಕ ಚಟುವಟಿಕೆಗಳು ಹಾಗೂ ಸಂದ ಪ್ರಶಸ್ತಿ ಗೌರವಗಳು ಅಲ್ಲದೆ ಅವರ ಕಲಾ ಸಾಹಿತ್ಯದ ಕುರಿತಾಗಿ ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ಏಳನೆಯ ಅಧ್ಯಾಯವು ಸಮಾರೋಪವಾಗಿದ್ದು ಮೇಲಿನ ಎಲ್ಲ ಅಧ್ಯಾಯಗಳ ಹಾಗೂ ಒಟ್ಟಾರೆ ಅಧ್ಯಾಯನ ಫಲಿತಗಳನ್ನು ಒಳಗೊಂಡಿದೆ.

## ವ್ಯಾಪ್ತಿ

ಬಹುಮುಖ ಕಲಾ ಸಾಧಕರಾಗಿರುವ ವ್ಹಿ.ಜಿ ಅಂದಾನಿಯವರ ಕಲಾ ಬದುಕು ಮತ್ತು ಕಲಾಕೃತಿಗಳ ಕುರಿತಾಗಿರುವ ಈ ಅಧ್ಯಯನದಲ್ಲಿ ಅಂಶಿಕವಾಗಿ ಮತ್ತು ಪೂರಕವಾಗಿ ಅವರ ಕಲಾ ಬದುಕನ್ನು ಪರಿಶೀಲಿಸಲಾಗಿದೆ. ಪ್ರಮುಖವಾಗಿರುವ ಅಧ್ಯಯನದ ವ್ಯಾಪ್ತಿಯು ಅಂದಾನಿಯವರ ಕಲಾಕೃತಿಗಳಿಗೆ

ಸಂಬಂಧ ಪಟ್ಟಿದೆ. ಅಂದಾಯವರು ತಮ್ಮ ಬಾಲ್ಯದಿಂದ ಇಂದಿನವರೆಗೆ ಸಾವಿರಾರು ಕಲಾಕೃತಿಗಳನ್ನು ರಚಿಸಿದ್ದಾರೆ. ಅವೆಲ್ಲ ಒಂದೇ ಕಡೆಗೆ ಸಂಗ್ರಹಗೊಂಡಿಲ್ಲ. ರಾಜ್ಯ ಮತು ರಾಷ್ಟದ ವಿವಿಧ ಭಾಗಗಳಲ್ಲದೇ ವಿದೇಶಗಳಲ್ಲೂ ನೆಲೆಗೊಂಡಿವೆ. ಹಾಗಾಗಿ ಸೀಮಿತ ಕಾಲಾವಧಿ ಮತ್ತು ಅಧ್ಯಯನದ ಮಿತಿಯಿಂದಾಗಿ ಲಭ್ಯವಾದ ಕೆಲವು ಪ್ರಾತಿನಿಧಿಕ ಕಲಾಕೃತಿಗಳನ್ನು ಆಯ್ಕೆ ಮಾಡಿಕೊಂಡು ವಿಶ್ಲೇಷಿಸುವ ವ್ಯಾಪ್ತಿಯನ್ನು ಈ ಅಧ್ಯಯದಲ್ಲಿ ಹಾಕಿಕೊಳ್ಳಲಾಗಿದೆ. ಜೊತೆಗೆ ಅವರು ಕಲಾ ಸಂಸ್ಥೆಯನ್ನು 'ದಿ ಐಡಿಯಲ್' ಕಲಾ ಶಾಲೆಯನ್ನು ಬೆಳೆಸಿದ್ದು, ಎಂ.ಎಂ.ಕೆ ಕಲಾ ಕಾಲೇಜನ್ನು ಸ್ಥಾಪಿಸಿದ್ದು, ಕಲಾ ಚಟುವಟಿಕೆಗಳನ್ನು ಹಮ್ಮಿಕೊಂಡಿದ್ದು, ಕಲಾ ಸಾಹಿತ್ಯ ರಚನೆ ಮಾಡಿದ್ದು, ಅವರಿಗೆ ಸಂದ ಪ್ರಶಸ್ತಿ ಗೌರವಗಳು ಎಲ್ಲ ಅಂಶಗಳನ್ನೂ ಸಹಿತ ಅಧ್ಯಯನದ ಅನುಕೂಲತೆಯ ದೃಷ್ಟಿಯಿಂದ ಒಂದು ಸೀಮಿತ ವ್ಯಾಪ್ತಿಗೆ ಅಳವಡಿಸಿಕೊಂಡು ಪ್ರಸ್ತುತ ಅಧ್ಯಯನ ಕೈಗೊಳ್ಳಲಾಗಿದೆ.

### ವೈಧಾನಿಕತೆ

ಈ ಪ್ರಬಂಧ ರಚನೆಗೆ ಎರಡು ರೀತಿಯ ಆಕರ ಸಾಮಗ್ರಿಗಳನ್ನು ಬಳಸಿ ಕೊಂಡು ವಿಷಯ ಸಂಗ್ರಹಣೆ ಮಾಡಿಕೊಳ್ಳುವ ವೈಧಾನಿಕತೆ ಅನುಸರಿಸಲಾಗಿದ್ದು, ಅವುಗಳನ್ನು ಈ ಕೆಗಿನಂತೆ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

೧. ಮೂಲ ಆಕರ ಸಾಮಗ್ರಿ

೨. ಆನುಷಂಗಿಕ ಆಕರ ಸಾಮಗ್ರಿ

### ೧. ಮೂಲ ಆಕರ ಸಾಮಗ್ರಿ

ಮೂಲ ಆಕರ ಸಾಮಗ್ರಿಯಿಂದ ವಿಷಯ ಸಂಗ್ರಹಣೆ ಮಾಡಿಕೊಳ್ಳಲು ಕೇತ್ರಕಾರ್ಯ ಅತ್ಯಂತ ಮಹತ್ವದ್ದು. ಇಲ್ಲಿ ಕ್ಷೇತ್ರಕಾರ್ಯದ ಹಿನ್ನೆಲೆಯಲ್ಲಿ ಛಾಯಾ ಚಿತ್ರಣ, ವೀಡಿಯೋ ಚಿತ್ರಣ, ಸಂದರ್ಶನ, ಚರ್ಚೆ ಮುಂತಾದವುಗಳ ಮುಖಾಂತರ ವಿಷಯ ಸಂಗ್ರಹ ಮಾಡಿಕೊಳ್ಳಲಾಗಿದ್ದು, ಅವುಗಳ ಸಂಕ್ಷಿಪ್ತ ಸ್ವರೂಪ ಕೆಳಗಿನಂತಿದೆ.

### ಛಾಯಾ ಚಿತ್ರಣ ಮತ್ತು ವೀಡಿಯೋ ಚಿತ್ರೀಕರಣ

ಮೂಲ ಆಕರ ಸಾಮಗ್ರಿಯಿಂದ ವಿಷಯ ಸಂಗ್ರಹಿಸುವ ನಿಟ್ಟಿನಲ್ಲಿ ಕಲಾವಿದರಾದ ವ್ಹಿ.ಜಿ ಅಂದಾನಿಯವರ ಆಯ್ದ ಕಲಾಕೃತಿಗಳು, ಅವರು ಕಲಿತ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳು, ಕಲಾಶಿಕ್ಷಣ ಪಡೆದ ಕಾಲೇಜು, ಅವರ ಜನ್ಮಸ್ಥಳ, ಸುತ್ತಲಿನ ಪರಿಸರ, ಅವರ ಮನೆ, ಕುಟುಂಬ ಸದಸ್ಯರು, ಸಮಕಾಲೀನ ವ್ಯಕ್ತಿಗಳು ಹೀಗೆ ಸಂಬಂಧಪಟ್ಟ ಮತ್ತು ಪೂರಕವಾದ ಸಂಗತಿಗಳ ಛಾಯಾಚಿತ್ರಣ ಮತ್ತು ವೀಡಿಯೋ ಚಿತ್ರೀಕರಣ ಮಾಡಿಕೊಳ್ಳಲಾಯಿತು.

### ಸಂದರ್ಶನ ಮತ್ತು ಚರ್ಚೆ

ಕಲಾವಿದರಾದ ವ್ಹಿ.ಜಿ. ಅಂದಾನಿಯವರ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಅನೇಕ ಬಾರಿ ಭೇಟಿ

ಮಾಡಿ ಅವರೊಂದಿಗೆ ಸಂದರ್ಶನ ನೆಡೆಸಲಾಯಿತು. ಈ ಸಂದರ್ಶನವು ಕೆಲವ ಸಲ ಪ್ರಶ್ನಾವಳಿಯ ರೂಪದಲ್ಲಿದ್ದರೆ ಮತ್ತೆ ಕೆಲವು ಸಲ ಚರ್ಚೆಯ ಸ್ವರೂಪದಲ್ಲಿತ್ತು. ಇದಲ್ಲದೇ ಅಂದಾನಿಯವರ ಕುಟುಂಬ ವರ್ಗ, ಸಂಬಂಧಿಕರು, ಊರಿನ ಗಣ್ಯರು, ಸಮಕಾಲೀನ ಮಿತ್ರರು, ಸಹಪಾಠಿ ವಿದ್ಯಾರ್ಥಿಗಳು, ಖ್ಯಾತ ಕಲಾವಿದರು, ಕಲಾವಿಮರ್ಶಕರು, ಸಾಹಿತಿಗಳು, ಇತಿಹಾಸಕಾರರು ಹೀಗೆ ಅನೇಕ ಜನರೊಂದಿಗೆ ಸಂದರ್ಶನ ನೆಡೆಸಿ ವಿಷಯದ ಕುರಿತಾಗಿ ಚರ್ಚಿಸಲಾಯಿತು. ಈ ರೀತಿ ಮೂಲ ಆಕರ ಸಾಮಾಗ್ರಿಗಳಿಂದ ವಿಷಯ ಸಂಗ್ರಹ ಮಾಡಿಕೊಂಡ ಮಾಹಿತಿಯನ್ನು ಪಟ್ಟಿಕೆಗಳಲ್ಲಿ ನಮೂದಿಸಿಕೊಳ್ಳಲಾಯಿತು.

**೨. ಆನುಷಂಗಿಕ ಆಕರ ಸಾಮಾಗ್ರಿ**

ಅಂದಾನಿಯವರ ಕುರಿತಾಗಿ ಇದುವರೆಗೆ ಪ್ರಕಟಗೊಂಡ ಲೇಖನಗಳು, ಪುಸ್ತಕಗಳು, ಪತ್ರಿಕಾ ಮಾಹಿತಿಗಳನ್ನು ಆನುಷಂಗಿಕ ಆಕರ ಸಾಮಾಗ್ರಿಗಳಾಗಿ ಬಳಸಿಕೊಳ್ಳಲಾಯಿತು. ಇದಲ್ಲದೇ ಪ್ರಕಟಿತ, ಅಪ್ರಕಟಿತ ಸಂಶೋಧನಾ ಪ್ರಬಂಧಗಳು, ಗೆಜೆಟಿಯರ್‌ಗಳು, ವಿಶ್ವಕೋಶಗಳು, ಅರ್ಥಕೋಶಗಳು, ಸಮಕಾಲೀನ ಕಲಾಕೃತಿಗಳನ್ನು ಸಹಿತ ಆನುಷಂಗಿಕ ಆಕರ ಸಾಮಾಗ್ರಿಗಳಾಗಿ ಬಳಸಿಕೊಂಡು ವಿಷಯ ಸಂಗ್ರಹ ಮಾಡಿಕೊಳ್ಳಲಾಯಿತು. ಆನುಷಂಗಿಕ ಆಕರ ಸಾಮಾಗ್ರಿಗಳಿಂದ ದೊರೆತ ಮಾಹಿತಿಯನ್ನು ಸಹಿತ ಪಟ್ಟಿಕೆಗಳಲ್ಲಿ ನಮೂದಿಸಿಕೊಳ್ಳಲಾಯಿತು.

ಈ ರೀತಿ ಮೂಲ ಆಕರ ಸಾಮಾಗ್ರಿ ಮತ್ತು ಆನುಷಂಗಿಕ ಆಕರ ಸಾಮಾಗ್ರಿಗಳಿಂದ ದೊರೆತ ಮಾಹಿತಿಗಳನ್ನು ಪಟ್ಟಿಕೆಗಳಲ್ಲಿ ನಮೂದಿಸಿಕೊಂಡು ಅದನ್ನು ವಿಷಯಾನುಸಾರ ವಿಂಗಡಿಸಿಕೊಂಡು, ವಿಶ್ಲೇಷಿಸಿ ಬರವಣಿಗೆಗೆ ಅಳವಡಿಸಿಕೊಳ್ಳುವ ವೈಧಾನಿಕತೆಯನ್ನು ಇಲ್ಲಿ ಅನುಸರಿಸಲಾಗಿದೆ.

**ಟಿಪ್ಪಣಿ**

೧. ಚಂದ್ರಹಾಸ ಜಾಲಿಹಾಳ(ಸಂ) :ಅಂದಾನಿ ಐವತ್ತು, ಅಂದಾನಿಗೆಳೆಯರಬಳಗ–೧೯೯೭

೨. ಡಾ.ಶಿವಾನಂದ ಬಂಟನೂರ :ವ್ಹಿ.ಜಿ.ಅಂದಾನಿ, ಕರ್ನಾಟಕಲಲಿತಕಲಾಅಕಾಡೆಮಿ,ಬೆಂಗಳೂರು–೨೦೦೪

೩. ಡಾ. ವ್ಹಿ.ಜಿ. ಅಂದಾನಿ(ಸಂ), :ಬಯಲುಬಯಲಾದ ರೇಖೆಗಳು,–೨೦೦೬



ಅಧ್ಯಾಯ -೨

# ಅಂದಾನಿಯವರ ಬಾಲ್ಯ, ಪರಿಸರ, ಮತ್ತು ಶಿಕ್ಷಣ

# ಅಧ್ಯಾಯ-೨

# ಬಾಲ್ಯ, ಪರಿಸರ, ಮತ್ತು ಶಿಕ್ಷಣ

## ಗುಲಬರ್ಗಾ ಜಿಲ್ಲೆಯ ಐತಿಹಾಸಿಕ ಹಿನ್ನಲೆ

'ಗುಲಬರ್ಗಾ' ವನ್ನು 'ಕಲುಬುರ್ಗಿ' ಎಂಬ ಪರ್ಯಾಯ ಹೆಸರಿನಿಂದಲೂ ಗುರುತಿಸಲಾಗುತ್ತದೆ. ಇದು ಐತಿಹಾಸಿಕವಾಗಿ ಸುಮಾರು ಕ್ರಿ.ಶ. ೧೨-೧೩ನೇ ಶತಮಾನದ 'ಬೆಳರಮುಳ್ಳಿ' ಶಿಲಾಶಾಸನದಲ್ಲಿ 'ಕಲಂಬರಿಗೆ' ಎಂಬುದಾಗಿ ಉಲ್ಲೇಖಿತಗೊಂಡಿದ್ದು, ಬೀದರ್ ಜಿಲ್ಲೆಯ ಶಾಸನವೊಂದರಲ್ಲೂ ಇದೇ ರೂಪ ದಾಖಲಾಗಿದ್ದು, ಇದು ಗುಲ್ಬರ್ಗಾದ ಪ್ರಾಚೀನರೂಪ ಎನ್ನಲಾಗುತ್ತದೆ. ಕ್ರಿ.ಶ. ೧೩೭೭ರ ಬೇಲೂರು (ಹಾಸನ ಜಿ.) ಹಾಗೂ ಕ್ರಿ.ಶ. ೧೫೩೭ರ ಶಿರಿವಾಳದ ಶಿಲಾಶಾಸನಗಳಲ್ಲಿ ಕ್ರಮವಾಗಿ 'ಕಲುಬರಗೆ', ಎಂದು ದಾಖಲಾಗಿದೆ. ವಿಜಯನಗರಕ್ಕೆ ಬಂದಿದ್ದ ಪರ್ಷಿಯನ್ ರಾಯಭಾರಿ ರಝಾಕನು ಇದನ್ನು 'ಕಲುಬುರ್ಗ್' ಎಂದೇ ಹೇಳಿದ್ದಾರೆ.[೧]

ಗುಲಬರ್ಗಾ ಎಂಬ ನಾಮಪದದ ನಿಷ್ಪತ್ತಿಗೆ ಸಂಬಂಧಿಸಿದಂತೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಗುಲ್ಬರ್ಗಾ ಎಂಬುದು ಹೆಚ್ಚು ಕಡಿಮೆ 'ಕಲಬುರುಗಿ' ಪದ ಪಾರಸೀಕರಣವಾಗಿದ್ದು, ಪಾರಸಿಯಲ್ಲಿ 'ಗುಲ್' ಎಂದರೆ ಹೂವು, 'ಬರ್ಗ್' ಎಂದರೆ ಎಲೆ ಎಂಬ ಅರ್ಥವಿದೆ. 'ಕಲಬುರುಗಿ' ಎಂಬ ಅಚ್ಚಕನ್ನಡ ರೂಪವೇ ಮಹಮದಿಯರಿಗೆ ಮೊದಮೊದಲು ಕಲುಬುರಗಿ ಎಂದೆನಿಸಿ ಮುಂದೆ ಅದುವೇ ಗುಲ್ಬರ್ಗಾ ಎಂದಾದಂತೆ ತೋರುತ್ತದೆ. ಒಟ್ಟಿನಲ್ಲಿ 'ಕಲುಬುರ್ಗಿ' ಎಂಬ ಹೆಸರು ಕ್ರಿ.ಶ. ೧೬ನೇ ಶತಮಾನದವರೆಗೂ ರೂಢಿಯಲ್ಲಿದ್ದು ಮುಸ್ಲಿಮರ ಆಡಳಿತದ ಪ್ರಭಾವದಿಂದಾಗಿ ನಂತರದಲ್ಲಿ 'ಗುಲ್ಬರ್ಗಾ' ಎಂಬ ರೂಪವನ್ನು ಪಡೆದಿದೆಯೆಂಬುದಾಗಿ ಅಭಿಪ್ರಾಯಪಡಲಾಗುತ್ತದೆ. ಆದರೂ 'ಕಲ್ಬುರ್ಗಿ' ಎಂಬ ಹೆಸರು ಹೆಚ್ಚಿನ ಪ್ರಮಾಣದಲ್ಲಿ ಪ್ರಚಲಿತದಲ್ಲಿದೆ.[೨]

ಗುಲಬರ್ಗಾ ಜಿಲ್ಲೆಯ ಪ್ರದೇಶವು ನೈಸರ್ಗಿಕವಾಗಿ ಸಂಪದ್ಭರಿತವಾಗಿದ್ದು, ಭೀಮಾ ನದಿಯು ವಾಯುವ್ಯ ಆಗ್ನೇಯ ದಿಕ್ಕಿನಲ್ಲಿ ಜಿಲ್ಲೆಯ ಮಧ್ಯದಲ್ಲಿ ಹರಿಯುತ್ತಿದ್ದು, ಇದರ ಉಪನದಿಗಳು ಜಿಲ್ಲೆಯನ್ನು ಆವರಿಸಿವೆ. ಈ ನದಿಯ ಉತ್ತರ ಭಾಗವು ಫಲವತ್ತಾದ ಕಪ್ಪುಮಣ್ಣಿನಿಂದ ಕೂಡಿದೆ. ಸಣ್ಣಪುಟ್ಟ ಬೆಟ್ಟಗಳ ಸಾಲುಗಳಿಂದ ತುಂಬಿ ಹೋಗಿವೆ. ಅಲ್ಲಲ್ಲಿ ತಾಮ್ರ, ಕಬ್ಬಿಣ, ಕಂಚು ಮೊದಲಾದ ಖನಿಜ ಸಂಪತ್ತು ಗಣನೀಯ ಪ್ರಮಾಣದಲ್ಲಿದೆ. ಆದ್ದರಿಂದಲೇ ಬಹಳ ಪ್ರಾಚೀನ ಕಾಲದಿಂದಲೂ ಈ ಪ್ರದೇಶವು ಜನರ ಆವಾಸ ಸ್ಥಾನವಾಗಿತ್ತು. ಸಂಪ್ರದಾಯ, ಸಮಕಾಲೀನ ಪ್ರಜ್ಞೆಯೊಂದಿಗೆ ಗುಲಬರ್ಗಾ

ವಿಭಾಗವು ಚಿತ್ರ ವಾಸ್ತುಶಿಲ್ಪಗಳಲ್ಲಿ ತನ್ನದೇ ನೆಲದ ಕಲ್ಪನೆಯನ್ನು ರೂಢಿಸಿಕೊಂಡಿದೆ. ಹಲವಾರು ಕ್ರಾಂತಿ, ಧಾಳಿಗಳ ಪ್ರಭಾವದಿಂದ ಬರಗಾಲ,

ಬಡತನ ಎದುರಿಸುತ್ತಾ ನಿರಂತರವಾಗಿ ತನ್ನ ನೋವನ್ನು ಚಿತ್ರಕಲೆ, ಶಿಲ್ಪಕಲೆ, ವಾಸ್ತುಕಲೆಗಳ ಮೂಲಕ ಪ್ರತಿಬಿಂಬಿಸಿಕೊಂಡು ಬಂದಿದೆ. ಕಲಾಕೃತಿಗಳಿಗೆ ಯಾವುದೇ ರೀತಿಯ ಪೋಷಣೆ ಸಿಗದೇ ನೂರಾರು ರೀತಿಯ ಅನಾಹುತಗಳಿಗೆ ತುತ್ತಾಗಿ ಹಾಳಾದ ಕಲಾಕೇಂದ್ರಗಳು ಈಗಲೂ ನೋಡಲು ಸಿಗುತ್ತವೆ. ಇವುಗಳಲ್ಲಿ ಕಾಳಗಿ, ಸಿರವಾಳ, ಸನ್ನತಿ, ಏವೂರು, ಕಿರಣಗಿ, ಮಣ್ಣೂರು, ಮಳಖೇಡ ಮತ್ತು ಹರಸೂರಿನಂತಹ ಹಲವಾರು ಗ್ರಾಮಗಳು ಒಂದಾನೊಂದು ಕಾಲದಲ್ಲಿ ಮೆರೆದ ಐತಿಹಾಸಿಕ ಕೇಂದ್ರಗಳಾಗಿದ್ದವು. ರಾಷ್ಟ್ರಕೂಟರು, ಹೊಯ್ಸಳ, ಜೈನ, ಶೈವ, ಮತ್ತು ಮುಸ್ಲಿಮರ ವಿವಿಧ ಸಾಂಸ್ಕೃತಿಕ, ನಾಗರಿಕ, ಶೈಕ್ಷಣಿಕ, ಧಾರ್ಮಿಕ, ಜೀವನದ ಬೆಳವಣಿಗೆಗಳ ವಿಕಾಸ ಚಿತ್ರಗಳಿಂದ ಪ್ರಬುದ್ಧ ರೀತಿಯಲ್ಲಿ ಕಾಣಿಸುತ್ತದೆ.[೬]

ಸಿರಿವಾಳ ಶಿಲ್ಪ ವಾಸ್ತುಶಿಲ್ಪಕ್ಕೆ ಹೆಸರಾದ ಕೇಂದ್ರವಾಗಿದ್ದು, ಒಂದನೆಯ ಶತಮಾನದ ನಾಗರೀಕತೆಯ ಕಲ್ಪನೆಯ ಜೊತೆಗೆ ದೇವಾಲಯಗಳ ಕೈಶಾಲೆಗಳ ಕೆತ್ತನೆ ಕೆಲಸ ಅದರ ಉತ್ಕೃಷ್ಟತೆ ಈಗಲೂ ನೋಡಲು ಸಿಗುತ್ತದೆ. ಇದು ಮೂರನೇ ಶತಮಾನದಲ್ಲಿ ಮಹಾನಗರವಾಗಿದ್ದು, ಇಲ್ಲಿರುವ ನೀರಿನ ಬಾವಿಯ ವಾಸ್ತುಶಿಲ್ಪ ವಿಶೇಷವಾದುದ್ದಾಗಿದೆ. ಇಲ್ಲಿ ನೂರಕ್ಕೂ ಹೆಚ್ಚಿನ ಸಂಖ್ಯೆಯ ಶೈವ ದೇವಾಲಯಗಳು ಹಾಗೂ ಜೈನ ಬಸದಿಗಳು ಇದ್ದವೆಂದು ಹೇಳಲಾಗುತ್ತದೆ.

ಇದೇ ರೀತಿ 'ಕಾಳಗಿ' ಮೂರನೇ ಶತಮಾನದ ಪಟ್ಟಣವಾಗಿದ್ದು ಅಲ್ಲಿ ಚಾಲುಕ್ಯ ಮತ್ತು ರಾಷ್ಟ್ರಕೂಟರ ದೇವಾಲಯಗಳನ್ನು ಈಗಲೂ ನೋಡಬಹುದು. ದೇವಾಲಯಗಳ ಸುತ್ತಲಿನ ಶಿಲ್ಪಕೃತಿ, ಶಿಲಾಬಾಲಿಕೆಯರ ವಿಗ್ರಹಗಳು ಅಷ್ಟೇ ಕಲಾತ್ಮಕವಾಗಿ ಕೆತ್ತಲ್ಪಟ್ಟಿವೆ. ಇಲ್ಲಿ ನಿರ್ಮಾಣಗೊಂಡ ಕಾಳೇಶ್ವರ ದೇವಾಲಯದ ಹತ್ತಿರದ ಬಾವಿ, ಅದರ ವಾಸ್ತು, ನಿರ್ಮಾಣಗೊಂಡ ರೀತಿ ದಕ್ಷಿಣ ಭಾರತದಲ್ಲಿಯೇ ವಿಶೇಷವಾದುದ್ದೆಂದು ಇತಿಹಾಸಕಾರರು ಅಭಿಪ್ರಾಯಪಡುತ್ತಾರೆ.

ನೃಪತುಂಗನ ಕಾಲಕ್ಕೆ ಮಾಳಖೇಡದಲ್ಲಿ ಅಕ್ಕುಜ್ಜ ಕಲ್ಲುಕಡಿಗ ಎಂಬ ಪ್ರಸಿದ್ಧ ವಾಸ್ತುಶಿಲ್ಪಕಾರ ನಿರ್ಮಾಣ ಮಾಡಿದ ಕಟ್ಟಡ ನಾರಾಯಿಯಲ್ಲಿ ಇಂದಿಗೂ ಕಾಣುತ್ತದೆ. ಅದೇ ಕಾಲದ ಮಹಾಂಕಾಳ ಶಿಲ್ಪಿಯ ಕಲಾಕೃತಿಗಳು ಹೈದರಾಬಾದ್ ಮತ್ತು ಲಂಡನ್ ಬ್ರಿಟಿಷ್ ವಸ್ತು ಸಂಗ್ರಹಾಲಯಗಳಲ್ಲಿ ಸಂಗ್ರಹಿಸಲ್ಪಟ್ಟಿವೆ. ಇವನು ನಿರ್ಮಿಸಿದ ವಿಧಾನದಲ್ಲಿ ಅವನು ಮಾಡುವ ರೀತಿಯಷ್ಟೇ ನಯವಾಗಿ, ಸುಂದರವಾಗಿ ನಿರೂಪಿಸಿದ್ದಾನೆ. ಈತ ಆ ಕಾಲದ ಮಹಾನ್ ಕಲಾವಿದನೆಂದು ನಿಸ್ಸಂದೇಹವಾಗಿ ಹೇಳಬಹುದು. ಇಂಥ ನೂರಾರು ಕಲಾವಿದರು ಈ ನಾಡಿಗೆ ತಮ್ಮ ಕಲಾಸೇವೆವನ್ನು ನೀಡುವ ಮೂಲಕ ಎಲೆಮರೆಯ ಕಾಯಿಯಂತೆ ಸೇವೆ ಸಲ್ಲಿಸಿದ್ದಾರೆ.[೭]

ಮುಸಲ್ಮಾನರ ಆಳ್ವಿಕೆಯಲ್ಲಿದ್ದ ಕಲಾವಿದರಿಗೆ ಅಷ್ಟೇ ಪ್ರೋತ್ಸಾಹವಿತ್ತು. ಅವರು ತಮ್ಮ ಮಸೀದಿಗಳಲ್ಲಿ ಟೆಂಪ್ರಾ ಪೇಂಟಿಂಗ್ಸ್‌ಗಳನ್ನು ಮಾಡಿದ್ದು ಗುಲಬರ್ಗಾದ ಬಂದೇನವಾಜ್ ದರ್ಗಾದಲ್ಲಿ ಕಾಣಬಹುದು. ಇಲ್ಲಿ ವಿವಿಧ ಆಕಾರಗಳ ಸುಂದರ ನಕ್ಷೆಗಳು ಎಲೆ, ಹೂವಿನ ಆಕಾರದ ಚಿತ್ರಗಳನ್ನು ನೋಡುತ್ತೇವೆ.

ಹದಿನಾಲ್ಕನೇ ಶತಮಾನದಿಂದ ಹದಿನೇಳನೇ ಶತಮಾನದವರೆಗೆ ನಿರ್ಮಾಣಗೊಂಡ ಮಿನಿಯೇಚರ್ ಪದ್ಧತಿಯ ಕೃತಿಗಳು ಈ ಭಾಗದಲ್ಲಿ ಬೆಳೆದು ವಿಕಾಸಗೊಂಡು ಪೋಷಣೆ ಸಿಗದೇ ವಿವಿಧ ದಿಶೆಯಲ್ಲಿ ಹರಡಿ ಹಂಚಿಹೋಗಿವೆ. ಅಲ್ಲದೇ ಹದಿನೇಳನೇ ಶತಮಾನದ ಸುರಪುರದ ನಾಯಕರ ರಾಜಾಶ್ರಯದಲ್ಲಿ ಗುರುಪಾದ್ರಿ ಎಂಬ ಚಿತ್ರಕಲಾವಿದ ಈ ನಾಡಿಗೆ ಹೊಸ ಮೆರುಗನ್ನು ತಂದುಕೊಟ್ಟ ವ್ಯಕ್ತಿಯೆಂದು ಹೇಳಬಹುದು. ಇವರ ಕೃತಿಗಳು ಮಿನಿಯೇಚರ ಪಂಕ್ತಿಗೆ ಸೇರಿದ್ದು, ತನ್ನದೇ ಆದಂತಹ ವಿಶೇಷವಾದ ಶೈಲಿಯನ್ನು ನಿರೂಪಿಸಿದ್ದಾನೆ. ಗರುಡಾದ್ರಿಯ ಕೃತಿಗಳಿಗೆ ವಿಮರ್ಶಕರಿಂದ ಮೈಸೂರು ಶೈಲಿ, ತಂಜಾವೂರು ಶೈಲಿಯ ಪ್ರಭಾವವಿರುವುದೆಂದು ಹೇಳಲಾಗುತ್ತದೆ. ಆದರೆ ಗರುಡಾದ್ರಿಯ ಕೃತಿಗಳು ಇದಕ್ಕೆ ಭಿನ್ನವಾಗಿದ್ದು, ಇವರ ಕೃತಿಗಳಲ್ಲಿ ಹೊಸ ದೃಷ್ಟಿಯ ವಿನ್ಯಾಸ, ಬಣ್ಣಗಳ ಬಳಕೆಯನ್ನು ಕಾಣುತ್ತೇವೆ. ಜೊತೆಗೆ ಇವರು ನಿರ್ಮಿಸಿದ 'ಸಾಮಂತ ರಾಜರ ಭಾವಚಿತ್ರಗಳು', 'ಕುದುರೆ ಸವಾರ', ಸರಸ್ವತಿ ಅಲ್ಲದೇ ಪೌರಾಣಿಕ ಚಿತ್ರಗಳು ಈ ಮಣ್ಣಿನ ಯಶೋಗಾಥೆಯನ್ನು ಎತ್ತಿ ತೋರಿಸುತ್ತವೆ.[೮]

ಇಂತ ಸಾಂಸ್ಕೃತಿಕ ಪರಿಸರ ಪ್ರತಿಯೊಬ್ಬ ವ್ಯಕ್ತಿಯ ಮೇಲೆ ಪ್ರಭಾವ ಬೀರುತ್ತದೆ. ಬಾಲ್ಯ ಜೀವನ, ಆಟಪಾಠ, ಭೌಗೋಳಿಕ, ಸಾಂಸ್ಕೃತಿಕ ಪರಿಸರ ಗಾಢವಾದ ಪರಿಣಾಮವನ್ನು ಬೀರುತ್ತದೆ. ಒಬ್ಬ ವ್ಯಕ್ತಿ ಬಾಲ್ಯದಲ್ಲಿ ಯಾವುದಾದರೂ ಒಂದು ವಿಷಯದ ಕುರಿತು ಪ್ರೇರಿತಗೊಂಡಿದ್ದರೆ, ಮುಂದೆ ಬೆಳೆದು ದೊಡ್ಡವರಾದ ಮೇಲೆ ಆ ವಿಷಯದ ಕ್ಷೇತ್ರದಲ್ಲಿಯೇ ಮುಂದುವರಿಯಲು ಇಚ್ಛಿಸುವುದು ಸಹಜ. ಹೀಗೆ ಬಾಲ್ಯವೇ ವ್ಯಕ್ತಿಯೊಬ್ಬನ ಬೆಳವಣಿಗೆಗೆ ಸ್ಫೂರ್ತಿದಾಯಕವಾಗುತ್ತದೆ. ಹಾಗಾಗಿಯೇ 'ಬೆಳೆಯುವ ಸಿರಿ ಮೊಳಕೆಯಲ್ಲಿ ನೋಡು' ಎಂಬ ಮಾತುಂಟು. ವಿವಿಧ ಕ್ಷೇತ್ರಗಳಲ್ಲಿ ಸಾಧನೆ ಮಾಡಿದ ಅನೇಕರು ತಮ್ಮ ಬಾಲ್ಯದಲ್ಲಿಯೇ ಆ ಸಾಧನೆಯ ಲಕ್ಷಣಗಳನ್ನು ತೋರಿಸಿದವರಾಗಿದ್ದಾರೆ.

ಬಾಲ್ಯದಲ್ಲಿನ ಪ್ರಾಥಮಿಕ ಶಿಕ್ಷಣ ಆ ಮಗುವಿನ ಭವಿಷ್ಯವನ್ನೇ ರೂಪಿಸುತ್ತದೆ. ಕಾರಣ ಬಾಲ್ಯದಲ್ಲಿಯೇ ಅವನ ಅಭಿರುಚಿಗಳು ಅವನ ಬರವಣಿಗೆ, ವರ್ತನೆ ಇತ್ಯಾದಿಗಳ ಮೂಲಕ ಬೆಳಕಿಗೆ ಬರಲಾರಂಭಿಸುತ್ತವೆ. ಇವುಗಳನ್ನು ಗುರುತಿಸಿ ಅವುಗಳನ್ನೇ ಪ್ರೋತ್ಸಾಹಿಸುವ ಪ್ರವೃತ್ತಿ ಇಂದಿನ ಸಂದರ್ಭ ಶಿಕ್ಷಣದಲ್ಲಿ ಅಪರೂಪವಾಗುತ್ತಿದೆ. ತಂದೆ ತಾಯಂದಿರ ಆಸೆಯಂತೆಯೇ ತನ್ನ ಶಿಕ್ಷಣವನ್ನು ಪೂರೈಸುವ ಮಗು ಕಾರ್ಖಾನೆಯ ಒಂದು ಉತ್ಪನ್ನದಂತಾಗಿದೆ. ಮಗುವಿನ ಅಭಿರುಚಿಗೆ ತಕ್ಕಂತೆ ಶಿಕ್ಷಣವನ್ನು ಪಡೆಯುವುದು ಇಂದಿನ ಸಂದರ್ಭದಲ್ಲಿ ಆಗುತ್ತಿಲ್ಲವೆಂಬುದನ್ನು 'ಮಗುವಿನ ಸ್ವಾತಂತ್ರ್ಯ ಹರಣ' ಎಂದು ಭಾವಿಸಿದರೆ ಅತಿಶಯೋಕ್ತಿಯೆನಿಸದು.

## ಬಾಲ್ಯ ಜೀವನ

ಕಲಾವಿದ ವ್ಹಿ.ಜಿ ಅಂದಾನಿಯವರು ೧೯೪೭ ನವಂಬರ್ ೨೮– ರಂದು ಗುಲಬರ್ಗಾ ಜಿಲ್ಲೆಯ ಹೊನ್ನಕಿರಣಗಿ ಎಂಬ ಪುಟ್ಟ ಗ್ರಾಮದಲ್ಲಿ ಜನಸಿದರು. ಇವರ ಪೂರ್ಣ ಹೆಸರು ವೀರಣ್ಣ. ತಂದೆ ಗುರಪ್ಪ ಅಂದಾನಿ. ತಾಯಿ ನೀಲಗಂಗಮ್ಮ ಅಂದಾನಿ. ತಂದೆ ಕೃಷಿಕರಾಗಿದ್ದು ವ್ಯವಸಾಯ ಮಾಡುತ್ತಿದ್ದರು. ತಾಯಿ ಗೃಹಿಣಿ. ಈ ದಂಪತಿಗಳಿಗೆ ಐದು ಜನ ಮಕ್ಕಳಲ್ಲಿ ನಾಲ್ಕು ಜನ ಗಂಡು ಮಕ್ಕಳು ಒಬ್ಬಳು ಹೆಣ್ಣು ಮಗಳು. ಈ ಐದು ಜನರಲ್ಲಿ ಅಂದಾನಿಯವರು ಕೊನೆಯವರು. ಶ್ರೀಮಂತ ಸುಸಂಸ್ಕೃತ ಕೃಷಿಕ ಮನೆತನ ಅಂದಾನಿಯವರದಾಗಿತ್ತು.

## ಮನೆತನದ ಹಿನ್ನೆಲೆ

ಒಬ್ಬ ವ್ಯಕ್ತಿಯನ್ನು ಕುರಿತು ಆಳವಾದ ಅಧ್ಯಯನ ಕೈಗೊಳ್ಳುವಾಗ ಆ ವ್ಯಕ್ತಿಯ ಪರಿಸರವನ್ನು ಸೂಕ್ಷ್ಮ ಹಾಗೂ ಸಮಗ್ರವಾಗಿ ಗಮನಿಸಬೇಕಾಗುತ್ತೆ. ಏಕೇಂದರೆ ಮನುಷ್ಯ ಬೆಳೆಯುತ್ತಾನೆ, ಸಾಧನೆ ಮತ್ತು ಸೇವೆಗಳ ಅಧ್ಯಯನ ಸಂದರ್ಭದಲ್ಲಿ ಆ ಪರಿಸರ ಪ್ರಭಾವವನ್ನು ಪರಿಗಣಿಸಬೇಕಾಗುತ್ತದೆ. ವ್ಹಿ.ಜಿ ಅಂದಾನಿಯವರ ಪೂರ್ವಿಕರು ಮೂಲತಃ ಕಿರಣಗಿಯವರೆಂದು ಆ ಊರಿನ ಜನ ಹೇಳುತ್ತಾರೆ.

ಅಂದಾನಿಯವರು ಪಡೆದದ್ದು ಔಪಚಾರಿಕ ಶಿಕ್ಷಣವಾದರೂ, ಅವರ ಕಲೆಯ ಮೂಲ ಸೆಲೆ ಆರಂಭವಾದುದು ಬಾಲ್ಯದಿಂದಲೇ. ಕಿರಣಗಿಯ ಅಂದಾನಿಯವರ ಮನೆಯ ಪರಿಸರ, ಹಳ್ಳಿಯ ವಾತಾವರಣ ಅವರು ಕಲಾವಿದರಾಗಿ ರೂಪಗೊಳ್ಳುವಲ್ಲಿ ಮಹತ್ವದ ಪಾತ್ರವಹಿಸಿದವು. ‘ತಾಯಿ ಹೊಲಿಯುತ್ತಿದ್ದ ಕೌದಿಯ ಮೇಲಿನ ಬಣ್ಣದ ಚಿತ್ತಾರಗಳು, ಕಾರುಹುಣ್ಣಿಮೆ. ಗೌರಿ ಮತ್ತು ಶೀಗಿ ಹುಣ್ಣಿಮೆಗಳಲ್ಲಿ ಮಾಡುತ್ತಿದ್ದ ಜನಪದ ಅಲಂಕಾರಗಳು ಅವರನ್ನು ಆಕರ್ಷಿಸಿದ್ದವು. ‘ತಂದೆ ಬರೆದ ಗೆರೆಗಳನ್ನು ನೋಡಿ ತಮ್ಮ ಕಣ್ಣುಗಳನ್ನು ತುಂಬಿಕೊಳ್ಳುತ್ತಿದ್ದರು. ತಂದೆ ಕೃಷಿಕನಾದರೂ ಕಲೆಯ ಕಡೆಗೆ ಒಲವು ಇತ್ತು. ಮನೆ ಮತ್ತು ದನದ ಕೊಟ್ಟಿಗೆಯ ಗೋಡೆಯ ಮೇಲೆ ತನಗೆ ತಿಳಿದ ಚಿತ್ರಗಳನ್ನು ಹುರಮಂಜು ಮತ್ತು ಸುಣ್ಣದಿಂದ ಅಂದವಾಗಿ ಜನಪದ ಚಿತ್ರಗಳನ್ನು ರೇಖಿಸುತ್ತಿದ್ದರು.’ ಇದು ಬಾಲಕ ವೀರಣ್ಣನ ಮನಸ್ಸಿನ ಮೇಲೆ ಅಚ್ಚಳಿಯದ ಪ್ರಭಾವ ಬೀರಿತು. ಹೀಗೆ ಗ್ರಾಮೀಣ ಪರಿಸರ, ಕಲಾಭಿರುಚಿಯುಳ್ಳ ತಂದೆ ಮತ್ತು ತಾಯಿಯ ಪ್ರಭಾವಗಳೇ ಇಂದು ಅವರೊಬ್ಬ ಪ್ರಖ್ಯಾತ ಕಲಾವಿದರಾಗಿ ರೂಪುಗೊಳ್ಳಲು ಮೂಲ ಪ್ರೇರಣೆಯಾಯಿತು.

## ಹೊನ್ನಕಿರಣಗಿ

ಹೊನ್ನಕಿರಣಗಿಯ ಮೂಲ ಹೆಸರು ಕಿರಣಗಿ ಎಂದಷ್ಟೆ ೧೯೬೩–೬೪ರಲ್ಲಿ ವೀರೇಂದ್ರ ಪಾಟೀಲರು ಲೋಕೋಪಯೋಗಿ ಮಂತ್ರಿ ಆಗಿದ್ದರು. ಅದೇ ವೇಳೆ ಭಾರತ ಚೀನಾ ಯುದ್ಧ. ತುರ್ತು ಪರಿಸ್ಥಿತಿ ಘೋಷಿಸಲಾಗಿತ್ತು. ತನ್ನಿಮಿತ್ತ ನಿಧಿಸಂಗ್ರಹದಲ್ಲಿ ತೊಡಗಿದ ಮಂತ್ರಿಗಳಿಗೆ ಕಿರಣಗಿಯ ಜನತೆ ೧೦೧ ತೊಲೆ ಚಿನ್ನ ಸಂಗ್ರಹಿಸಿ ನೀಡಿತ್ತು. ಆಗ ಅವರು ಈ ಊರಿಗೆ ‘ಹೊನ್ನಕಿರಣಗಿ’ ಎಂದು ವಿಶೇಷಣ

ಬಳಸಿದರು. ಕಿರಣಗಿ ಹೊನ್ನಕಿರಣಗಿಯಾದದ್ದು ಹೀಗೆ. ಇಂತಹ ಸಮೃದ್ದ ಗ್ರಾಮ ಪರಿಸರದ ಹಿನ್ನಲೆ ಕಲಾವಿದ ಅಂದಾನಿಯವರು. ಸುತ್ತಲೂ ಫಲವತ್ತಾದ ಕಪ್ಪು ನೆಲವಿರುವ ಕಿರಣಗಿ ಒಂದು ಸುಂದರ ಹಳ್ಳಿ. ಬಿಸಿಲನ್ನು ಉಂಡು ಮಲಗಿದಂತಿರುವ ಹಾಸುಗಲ್ಲಿನ ರಸಗಳು, ಪೇರಿಸಿಟ್ಟ ಬಂಡೆಗಲ್ಲಿನ ಗೊಡೆ, ಮನೆ ಚಪ್ಪರಗಳು ಎಲ್ಲಾ ಕಲ್ಲುಮಯ , ಮಧ್ಯ ಕಳೆಕಟ್ಟಿದ ಕಲಾತ್ಮಕ ಕೆತ್ತನೆಯ ಕುದುರೆ ಬಾಗಿಲು, ಕಿಟಕಿಗಳು, 'ಹೊನ್ನ ಕಟ್ಟುವ ಉಡಿಯೊಳಗೆ' ಎಂಬ ಜನಪದ ಉಕ್ತಿಯಂತೆ ಸಿರಿ ಸಮೃದ್ಧಿ, ಬಂಗಾರದ ಪ್ರದೇಶದಲ್ಲಿದ್ದೂ ಬರಗಾಲವೆಂಬುದೇ ಗೊತ್ತಿಲ್ಲದ ಈ ಊರಿನಲ್ಲಿ ಮಳೆಯೂ ಸಮೃದ್ದ, ಬೆಳೆಯೂ ಸಮೃದ್ದ. ಅಂತೆಯೇ ಇಲ್ಲಿನ ಎಲ್ಲವೂ ಸಶಕ್ತ. ಬಾಲ್ಯದಿಂದ ಇಂದಿನವರೆಗೂ ಈ ಊರಿನ ದನಕರುಗಳ ಖರಪುಟಗಳ ನಾದ, ಜನರಿಂದ ಹಸುಕಂದಮ್ಮಗಳಿಂದ ತುಂಬಿ ತುಳುಕುವ ಮನೆಗಳು; ಹಬ್ಬ-ಹರಿದನಗಳಂದು ನಡೆಸುವ ದೇವರ ಉತ್ಸವ ಜಾತ್ರೆಗಳು, ಜನಪದ ಕಲೆಗಳು ಅಲ್ಲದೆ ಜೋಳ, ತೊಗರಿ, ಹತ್ತಿ ಬೆಳೆಗಳು ಹಸಿರು ತುಂಬಿದ ಹೊಲಗದ್ದೆಗಳು, ಸುಗ್ಗಿಯ ಸಂದರ್ಭದಲ್ಲಿ ರಾತ್ರಿಯಿಡಿ ಹಾಡುಗಳನ್ನು ಹೇಳುತ್ತಾ ರಾಶಿ ಮಾಡುವುದು. ಹೀಗೆ ಎಲ್ಲವನ್ನೂ ಒಳಗೊಂಡ ಸಮೃದ್ಧ ದೃಶ್ಯಾನುಭವಗಳು ಬಗೆಯ ರೂಪಕಾರಗಳಾಗಿ ಅಷ್ಟೇ ಶಕ್ತಿಯುತವಾಗಿ ಅವರ ಕಲಾಕೃತಿಗಳಲ್ಲಿ ಮೈತಳೆದಿವೆ"[೧೦]

ಇಂತಹ ಸಾಂಸ್ಕೃತಿಕ ಪರಿಸರದಲ್ಲಿ ಅಂದಾನಿಯವರ ಬಾಲ್ಯವು, ವಿವಿಧ ಬಗೆಯ ಗ್ರಾಮೀಣ ಆಟಗಳು ಹಾಗೂ ತಂದೆಯ ಮೌಲ್ಯಾಧಾರಿತ ಜೀವನಕ್ರಮದ ಮೂಲಕ ಕಳೆಯಿತು. ಆಟದ ಬಗ್ಗೆ ಹೆಚ್ಚಿನ ಆಸಕ್ತಿ ಹೊಂದಿದ್ದ ಅಂದಾನಿಯವರು ತಮ್ಮ ಬಾಲ್ಯದಕಲಾಸಕ್ತಿಯ ನೆನಪನ್ನು ಹೀಗೆ ನೆನೆಯುತ್ತಾರೆ. 'ಚಿಕ್ಕಂದಿನಲ್ಲಿ ಹಳ್ಳಿಯ ಸೊಬಗಿನ ಕಲಾವಂತಿಕೆಗೆ ಮಾರು ಹೋದ ನಾನು ಮನೆ ಎದುರಿಗಿರುವ ಕುಂಬಾರರ ಮನೆಯಲ್ಲಿ ಮಣ್ಣಿನಪಾತ್ರೆಗಳು, ಗೊಂಬೆ, ಆಟಿಕೆಗಳನ್ನು ಮಾಡುವ ಮೂಲಕ ನನ್ನಲ್ಲಿರುವ ಕಲಾವಿದನನೂ ಕಂಡುಕೊಂಡೆ ಎನ್ನುತ್ತಾರೆ.'[೧೧]

ಚಿಕ್ಕವನಿದ್ದಾಗ ಯಾವ ವಿಷಯದಲ್ಲಿ ವ್ಯಕ್ತಿಯು ತೀವ್ರತರವಾದ ತಲ್ಲೀನತೆ ಹೊಂದಿರುತ್ತಾನೆಯೋ, ಅದೇ ವಿಷಯದಲ್ಲಿ ಆತನು ತನ್ನ ಮುಂದಿನ ಬದುಕಿನಲ್ಲಿ ಅದ್ವಿತೀಯವಾದ ಸಾಧನೆ ಮಾಡುತ್ತಾನಂತೆ. ಈ ಮಾತು ವೀರಣ್ಣನ ಬದುಕಿನಲ್ಲಿ ನೂರಕ್ಕೆ ನೂರರಷ್ಟು ಸತ್ಯವಾಗಿದೆ. ತನ್ನ ಮನೆಯ ಎದುರಿಗಿದ್ದ ಕುಂಬಾರರ ಮನೆಯಲ್ಲಿ ತಿಗರಿಯ ಮೇಲೆ ಕೆಸರು ತಿರುವುತ್ತಲೇ ಅದು ಸುಂದರ ಆಕಾರ ಪಡೆಯುತ್ತಿರುವ ಪರಿಯನ್ನು ನೋಡುತ್ತಾ ತಲ್ಲೀನನಾಗುತ್ತಿದ್ದೆನು. ಕುಂಬಾರರ ಮನೆಯಲ್ಲಿ ಗಡಿಗೆ ಮಾಡೋ ಮಣ್ಣನ್ನು ತಗೊಂಡು ನಾನೇ ಮಣ್ಣೆತ್ತು ಮಾಡುತ್ತಿದ್ದೆನು. ನಾಗರ ಅಮವಾಸ್ಯೆ, ಗಣೇಶ ಚತುರ್ಥಿಗೆ ಮಣ್ಣಿನ ಮೂರ್ತಿ ಮಾಡುವುದು. ಹೀಗೆ ಮಣ್ಣಿನಿಂದ ಆರಂಭಗೊಂಡ ತಮ್ಮ ಕಲಾಜೀವನವನ್ನು ನೆನಪಿಸಿಕೊಳ್ಳುತ್ತಾರೆ.

**ಶಿಕ್ಷಣ**

"ನಮ್ಮ ಬದುಕನ್ನು ಸರ್ವಾಂಗ ಸುಂದರವನ್ನಾಗಿ ಮಾಡಿಕೊಂಡು ಬಹುಜನ ಹಿತಾಯ

ಸುಖಾಯವಾದ ಬಾಳನ್ನು ಸಾಗಿಸ ಬೇಕಾದರೆ ಶಿಕ್ಷಣ ಅವಶ್ಯ" 'ವಿದ್ಯೆ ಅಥವಾ ಶಿಕ್ಷಣವಿಲ್ಲದ ಮನುಷ್ಯ ಪಶುವಿಗೆ ಸಮಾನ' ವೆನ್ನುವುದು ಶಿಕ್ಷಣದ ಮಹತ್ವ ಎಂಥದ್ದು ಎಂಬುದನ್ನು ತಿಳಿಸುತ್ತದೆ. ಮಾನವ ಜೀವನ ಮುಖ್ಯವಾಗಿ ತನು, ಮನ, ಅತ್ಮಗಳೆಂಬ ಮೂರು ಅಂಶಗಳನ್ನು ಹೊಂದಿದೆ. ಶಿಕ್ಷಣವು ಇವುಗಳನ್ನು ಸಂಸ್ಕರಿಸುವ ಕಾರ್ಯವನ್ನು ಸದಾ ಕಾಲವು ಮಾಡುತ್ತಿರುತ್ತದೆ. ಅತ್ಮದ ಉದ್ಧಾರಕಾಗಿ ಧರ್ಮ, ಆಧಾತ್ಮ, ಪಾರಮಾರ್ಥಿಕ ಮೌಲ್ಯಗಳನ್ನು ನೀಡುವುದೇ ನಿಜವಾದ ಶಿಕ್ಷಣ. ಈ ರೀತಿಯ ಶಿಕ್ಷಣದಿಂದ ಕರ, ಉರ, ಶಿರಗಳ ಸಂವರ್ಧನೆಯಾಗುವುದು. 'ಕರ'ವು ಕಾರ್ಯವನ್ನು 'ಉರ'ವು ಹೃದಯವನ್ನು 'ಶಿರವು' ಅರಿವನ್ನು ಸೂಚಿಸಲಾಗುತ್ತದೆ. ಶಿಕ್ಷಣವು ದೇಹಕ್ಕೆ ಪುಷ್ಠಿಯನ್ನು, ಮನಕ್ಕೆ ವೈಶಾಲ್ಯತೆಯನ್ನು, ಆತ್ಮಕ್ಕೆ ಆನಂದವನ್ನು ಕೊಟ್ಟು ಅಂತಃಕರಣವನ್ನು ಅರಳಿಸಿ ಸದ್ಗುಣಗಳನ್ನು ಮೈಗೂಡಿಸಿಕೊಂಡು ಬರಲು ಇದು ಪ್ರೇರಣೆಯನ್ನು ನೀಡುತ್ತದೆ.[೧೨] ಹೀಗಾಗಿ ಮನುಷ್ಯನ ಬದುಕಿನಲ್ಲಿ ಶಿಕ್ಷಣಕ್ಕೆ ಕೊಡುವಷ್ಟು ಮಹತ್ವವನ್ನು ಇನ್ನಾವುದೇ ವಿಷಯಕ್ಕೆ ಕೊಡುವುದಿಲ್ಲ. ಇಂತಹ ಸಂಗತಿಗಳನ್ನು ಅರಿತುಕೊಂಡ ಅಂದಾನಿಯವರ ತಂದೆ ಬಾಲಕ ವೀರಣ್ಣನನ್ನು ಶಾಲೆಗೆ ಸೇರಿಸಿದರು.

ಅಂದಾನಿಯವರು ಕಿರಣಗಿಯಲ್ಲಿಯೇ ಪ್ರಾಥಮಿಕ ಶಿಕ್ಷಣವನ್ನು ಪ್ರಾಂರಭಿಸುತ್ತಾರೆ. ಇವರದು ಅವಿಭಕ್ತ ಕುಟುಂಬವಾಗಿದ್ದರಿಂದ ಬಾಲ್ಯದಲ್ಲಿ ಸಂಬಂಧಿಕರ ಒಡನಾಟ ಚೆನ್ನಾಗಿ ಬೆಳೆದಿತ್ತು. ಮನೆಯಲ್ಲಿ ಚಿಕ್ಕಪ್ಪ, ಅಜ್ಜಿ, ಸೋದರತ್ತೆ ಮತ್ತು ನೆರೆ ಹೊರೆಯವರ ಒಡನಾಟದೊಡನೆ ಕಳೆದ ತಮ್ಮ ಬಾಲ್ಯ ದಿನಗಳನ್ನು ಈಗಲೂ ಮಧುರ ನೆನಪುಗಳೊಂದಿಗೆ ಎಳೆ ಎಳೆಯಾಗಿ ಬಿಚ್ಚಿಡುತ್ತಾರೆ. ಹೊಣ್ಣಕಿರಣಗಿಯಲ್ಲಿ ಒಂದರಿಂದ ನಾಲ್ಕನೆಯ ತರಗತಿಯವರೆಗೆ ಕಲಿತರು.

ಅಂದಾನಿಯವರು ಹೊನ್ನಕಿರಣಗಿಯಲ್ಲಿ ಪ್ರಾಥಮಿಕ ಶಿಕ್ಷಣ ಪಡೆದುಕೊಳ್ಳುತಿರುವಾಗ ಕಲಿಯುತ್ತಿರುವಾಗ ವ್ಯವಸ್ಥಿತವಾದ ಶಾಲಾಕಟ್ಟಡ ಇರಲಿಲ್ಲ. ಇದ್ದ ಶಾಲಾ ಕೊಠಡಿ ಕೂಡ ದನದ ಕೊಟ್ಟಿಗೆಯ ಹಾಗೆ  ಇದ್ದವು. ಪ್ರತ್ಯೇಕವಾದಂತಹ ಕೋಣೆಗಳು ಮತ್ತು ಪೀಠೋಪಕರಣಗಳಿರಲಿಲ್ಲ. "ಆಗಿನ ಸಂದರ್ಭದಲ್ಲಿ ಮೋಲಿಸಾಬ ಮತ್ತು ಉಸ್ಮಾನಸಾಬ ಎಂಬ ಇಬ್ಬರು ಶಿಕ್ಷಕರು ಶಹಾಬಾದದಿಂದ ಕಲಿಸುವುದ್ದಕ್ಕೆ ಬರುತ್ತಿದ್ದರು. ಇವರ ವಸತಿ, ಊಟೋಪಚಾರವೆಲ್ಲ ಅಂದಾನಿಯವರ ಮನೆಯಲ್ಲಿ ನಡೆಯುತ್ತಿದ್ದವು. ಒಂದರಿಂದ ಮೂರನೆಯ ತರಗತಿಯವರೆಗೆ ಶಿಕ್ಷಣ ಸರಿಯಾಗಿ ದೊರಕಲಿಲ್ಲ. ತದನಂತರ ನಾಲ್ಕನೆಯ ತರಗತಿಗೆ ಧರ್ಮರಾವ ಎನ್ನುವ ಶಿಕ್ಷಕರು ಬಂದಮೇಲೆ ಶಿಕ್ಷಣದ ಮಟ್ಟ ಸ್ವಲ್ಪ ಸುಧಾರಿಸಿತ್ತು."[೧೩]

ಅಂದಾನಿಯವರ ಮನೆಯಲ್ಲಿ ಸಂಯುಕ್ತ ಕರ್ನಾಟಕ, ಮತ್ತು ಉರ್ದು ದಿನ ಪತ್ರಿಕೆಗಳು ಬರುತ್ತಿದ್ದವು. ಸಂಯುಕ್ತ ಕರ್ನಾಟಕದಲ್ಲಿ ಪ್ಯಾಂಟಮ್ ಸಾಹಸದಂತಹ ಚಿಕ್ಕ ಚಿತ್ರಗಳು ಪತ್ರಿಕೆ ಎಡಭಾಗದಲ್ಲಿ ಸಣ್ಣ ಬಾಕ್ಸನಲ್ಲಿ ಬರುತ್ತಿದ್ದವು. ಪತ್ರಿಕೆಯಲ್ಲಿ ಬಂದ ಚಿತ್ರವನ್ನು ಪ್ರತಿದಿನವು ತಪ್ಪದೇ ನೋಡುತ್ತಿದ್ದರು. ಪತ್ರಿಕೆ ಓದದೇ ಅದರಲ್ಲಿರುವ ಚಿತ್ರಗಳನ್ನು ಮಾತ್ರ ಗಮನಿಸುತ್ತಿದ್ದರು. ಅಂದಾನಿಯವರಿಗೆ ಆ ಚಿತ್ರಗಳನ್ನು ಹೇಗೆ ಆಕರ್ಷಕವಾಗಿ ರಚಿಸುವರು ಎನ್ನುವುದು ಕುತೂಹಲಕರ ವಿಷಯವಾಗಿತ್ತು.

'ತೊಗರಿ ಬೆಳೆಯ ಕಣಜ' ಎಂದೇ ಪ್ರಸಿದ್ದಿಯಾಗಿರುವ ಗುಲಬರ್ಗಾ ಜಿಲ್ಲೆ ತೊಗರಿ ಬೆಳೆಯಲ್ಲಿ ಇಡೀ ರಾಜ್ಯದಲ್ಲಿ ಅಷ್ಟೇ ಅಲ್ಲದೇ, ದೇಶ ಮತ್ತು ಏಷ್ಯಾ ಖಂಡದಲ್ಲಿ ತನ್ನ ಸ್ಥಾನವನ್ನು ಗುರುತಿಸಿಕೊಂಡಿದೆ. ಇದರಿಂದ ಗುಲಬರ್ಗಾದಲ್ಲಿ ತೊಗರಿಯ ಮಿಲ್‌ಗಳು ಬಹಳಷ್ಟು ಸ್ಥಾಪನೆಯಾಗಿವೆ. ಈ ಮಿಲ್‌ನವರು ತಮ್ಮ ಕಂಪೆನಿಯ ಹೆಸರಿನ ಕ್ಯಾಲೆಂಡರ್‌ಗಳನ್ನು ಮುದ್ರಿಸಿ ಕೊಡುತ್ತಿದ್ದರು. ಈ ಕ್ಯಾಲೆಂಡರ್‌ಗಳನ್ನು ಅಂದಾನಿಯರ ಅಣ್ಣ ಭಗವಂತರಾವ್ ಅವರು ಮನೆಗೆ ತರುತ್ತಿದ್ದರು. ಇದರಲ್ಲಿ ಚಿತ್ರಗಳು ಇದ್ದರೂ ಕೂಡ ಅಂದಾನಿಯವರಿಗೆ ಅದು ಇಷ್ಟವಾಗುತ್ತಿರಲಿಲ್ಲ. ಅದರ ಮೇಲೆ ಅವರೇ ರಚಿಸಿದ ಚಿತ್ರಗಳು ಅವರಿಗೆ ಇಷ್ಟವಾಗುತ್ತಿದ್ದವು. ಹೀಗಾಗಿ ಕ್ಯಾಲಂಡರವನ್ನು ತಿರುವಿ ಹಾಕಿ ಅದರ ಮೇಲೆ ಚಿತ್ರಗಳನ್ನು ಬಿಡಿಸುತ್ತಿದ್ದರು. ಅವರ ಅಣ್ಣ ಅದನ್ನು ಕಂಡು ಅಂದಾನಿಯವರ ಜೊತೆಗೆ ಜಗಳವಾಡುತ್ತಾ 'ಹೊಸ ಕ್ಯಾಲೆಂಡರ್‌ನಲ್ಲಿ ಇದೇನ ಮಾಡಿದಿ?' ಎಂದು ಬಯ್ಯುತ್ತಿದ್ದರು. ಆ ಸಂದರ್ಭದಲ್ಲಿ ಕ್ಯಾಲೆಂಡರ್‌ನ ಪೇಪರ್ ಚೆನ್ನಾಗಿ ಇರುತ್ತಿದ್ದವು. ಅದರ ಮೇಲೆ ನೆಹರು, ವಲ್ಲಭಬಾಯಿ ಪಟೇಲ್, ಗಾಂಧೀಜಿ ಹೀಗೆ ಅನೇಕ ಮಹಾನ್ ವ್ಯಕ್ತಿಗಳ ಚಿತ್ರಗಳನ್ನು ಬಿಡಿಸುತ್ತಿದ್ದರು.

ಕಿರಣಗಿಯಲ್ಲಿ ಆಗ ಸೋಲಾಪೂರದಿಂದ ಒಬ್ಬ ಪೇಂಟರ್ ಬಂದು ದೇವಾಲಯ ಮತು ಮನೆಗಳ ಗೋಡೆಗಳ ಮೇಲೆ ನಕ್ಷಾ ಚಿತ್ರಗಳನ್ನು ಬರೆಯುತ್ತಿದ್ದನು. ಹೀಗಾಗಿ ಅವನು ಕಲಾಕೃತಿ ಹೇಗೆ ಮಾಡುತ್ತಾನೇ ಟೆಂಪರಾ ವರ್ಣ, ಮತ್ತು ಅಂಟು ಹೇಗೆ ಕಲಸುತ್ತಾನೆಂದು ಊರಿನ ಒಂದಿಷ್ಟು ಹುಡುಗರು ಮತ್ತು ಅಂದಾನಿಯವರು ಆ ಪೇಂಟರನ ಹಿಂದೆಯೇ ಇರುತ್ತಿದ್ದರು. ಅವನು ಮಾಡುತ್ತಿರುವ ಚಿತ್ರಗಳನ್ನು ಅಂದಾನಿಯವರು ಕುತೂಹಲದಿಂದ ನೋಡುತ್ತಿದ್ದರು.

ಅಂದಾನಿಯವರು ಶಾಲೆಗೆ ರಜೆ ಇದ್ದ ಸಂದರ್ಭದಲ್ಲಿ ಮಿತ್ರರ ಗುಂಪನ್ನು ಕಟ್ಟಿಕೊಂಡು ಹೊಲಗದ್ದೆಗಳಿಗೆ ಹೋಗುತ್ತಿದ್ದರು. ಅಲ್ಲಿ ರಬ್ಬರ್ ಬಳ್ಳಿಯಿಂದ ಹಾಲನ್ನು ಸಂಗ್ರಹಿಸಿ ಅದರಿಂದ ರಬ್ಬರ್ ಚಂಡನ್ನು ತಯಾರಿಸಿ 'ದಪ್ಪನ ದುಪ್ಪೆ' ಮರಕೋತಿ, ಲಗೋರಿ ಆಟಗಳನ್ನು ಆಡುತ್ತಿದ್ದರು. ಅಲ್ಲದೇ ಗಾಜಿನ ಗೋಲಿಗಳಿಲ್ಲದ ಆ ಕಾಲದಲ್ಲಿ ತಾವೇ ಕಲ್ಲಿನ ಗೋಲಿ ತಯಾರುಮಾಡುತ್ತಿದ್ದರು. ಬೆಳಿಗ್ಗೆ ಹೋದಕೂಡಲೆ ಕಲ್ಲು ತೆಗೆದುಕೊಂಡು ಕಟೆಯುವುದಕ್ಕೆ ಸುರುಮಾಡಿದರೆ ಸಂಜೆ ಯಾಗುವದರೊಳಗೆ ತಯಾರಿಸಿ ಆಟವಾಡುತ್ತಿದ್ದರು. ಇದಲ್ಲದೇ ಊರಲ್ಲಿ ಯಾವುದಾದರೂ ಜಾತ್ರೆ ಬಂದರೆ ಅಲ್ಲಿ ಸಿಗರೇಟ್ ಡಬ್ಬಿಗಳನ್ನು ಸಂಗ್ರಹಿಸಿ ಅದರಿಂದ ದೊಡ್ಡ ದೊಡ್ಡ ಬಲೂನ್‌ಗಳನ್ನು ಮಾಡಿ ಮನೆಯಲ್ಲಿ ತೂಗು ಹಾಕುತ್ತಿದ್ದರು. ಇದನ್ನು ಕಂಡು ಮನೆಯವರು ಅಂದಾನಿಯವರಿಗೆ ಒಂದು ಪ್ರತ್ಯೇಕವಾದ ಕಪಾಟನ್ನು ಕೊಟ್ಟಿದ್ದರು. ಅಂದಾನಿಯವರು ತಮಗೆ ಚೆನ್ನಾಗಿರುವ ವಸ್ತು ಕಂಡರೆ ಅದನ್ನು ತಂದು ತಮಗೆ ಕೊಟ್ಟ ಜಾಗದಲ್ಲಿ ನೀಟಾಗಿ ಜೋಡಿಸಿಡುತ್ತಿದ್ದರು. ಹೀಗಾಗಿ ಆ ಕಪಾಟು ತುಂಬಿಹೋಗಿತ್ತು. ಅಲ್ಲದೇ ಬಾಲ್ಯದಲ್ಲಿ ಜೋಳದ ದಂಟಿನಿಂದ ಎತ್ತಿನ ಗಾಡಿಯನ್ನು ತಯಾರಿಸುವುದು, ತಮ್ಮ ಮನೆಯ ಮಾಡಲ್ ಮಾಡುವುದು ಇಂತಹ ಹವ್ಯಾಗಳನ್ನು ಬೆಳೆಸಿಕೊಂಡಿದ್ದ ಅಂದಾನಿಯವರು ಎಂದೂ ನಿಂತ ನೀರಾಗದೆ ಸದಾ ಹರಿಯುವ ನದಿಯಂತೆ ಒಂದಲ್ಲ ಒಂದು ಸೃಜನಾತ್ಮಕ ಪ್ರಯೋಗದಲ್ಲಿ ತೊಡಗುತ್ತಿದ್ದರು.

## ಮಾಧ್ಯಮಿಕ ಶಿಕ್ಷಣ

ಅಂದಾನಿಯವರು ನಾಲ್ಕನೆಯ ತರಗತಿಯವರೆಗೆ ಕಿರಣಗಿಯಲ್ಲಿ ಓದಿದ ನಂತರ ಮುಂದಿನ ವಿದ್ಯಾಭ್ಯಾಸಕ್ಕಾಗಿ ಗುಲಬರ್ಗಾದ ಶರಣಬಸವೇಶ್ವರ ಶಾಲೆಗೆ ಸೇರಿಕೊಂಡರು. ಗಾಜಿಪೂರದಲ್ಲಿ ಅವರ ಚಿಕ್ಕಪ್ಪನ ಮನೆ ಇತ್ತು. ಆ ಮನೆಯ ಒಂದು ಕೋಣೆಯಲ್ಲಿ ಅಂದಾನಿ ಗೆಳೆಯರಾದ ಶರಣಪ್ಪ ಯನಗುಂಡಿ, ಮಲ್ಲೆಪ್ಪ ಶಿವಗೊಂಡ, ಮತ್ತು ಬಸವರಾಜ ಉಪ್ಪಿನ ಅವರ ಜೊತೆ ವಾಸವಾಗಿದ್ದರು. ಊರಿನಿಂದ ಎರಡು ದಿನಗಳಿಗೊಮ್ಮೆ ಟಾಂಗಾದಲ್ಲಿ ಬುತ್ತಿ ಬರುತ್ತಿತ್ತು. ಬುತ್ತಿ ಬರದಿದ್ದಾಗ ತಮ್ಮ ಕೋಣೆಯ ಪಕ್ಕದಲ್ಲಿದ್ದ ಖಾನವಳಿಯಲ್ಲಿ ಊಟ ಮಾಡಿಕೊಂಡು ಶಾಲೆಗೆ ಹೋಗುತ್ತಿದ್ದರು.

ಅಂದಾನಿಯವರಿಗೆ ಮೊದಲಿನಿಂದಲೂ ಕಲೆಯೆಂದರೆ ಪಂಚಪ್ರಾಣ. ಇವರು ಎಸ್.ಬಿ ಹೈಸ್ಕೂಲ್‌ನಲ್ಲಿ ಓದುತ್ತಿದ್ದಾಗ ಬಂಕೂರಕರ ಎಂಬ ಕಲಾ ಶಿಕ್ಷಕರಿಂದ ಪ್ರಭಾವಿತರಾಗಿದ್ದರು. ಹೀಗೆ ಅಂಕುರಿಸಿದ ಕಲಾಭಿಲಾಷೆಗೆ ಒಳ್ಳೆಯ ಪ್ರೋತ್ಸಾಹ ದೊರೆತಿದ್ದರಿಂದ ಹೈಸ್ಕೂಲಿನಲ್ಲಿ ಪ್ರತಿ ವರ್ಷ ನಡೆಯುತ್ತಿದ್ದ ಸರಸ್ವತಿ ಪೂಜೆಯ ಚಿತ್ರಕಲಾ ಸ್ಪರ್ಧೆಯಲ್ಲಿ ಪ್ರಥಮ ಸ್ಥಾನ ಪಡೆಯುತ್ತಿದ್ದರು. ಅಲ್ಲದೇ ಇತರ ಪಠ್ಯೇತರ ಚಟುವಟಿಕೆಗಳಲ್ಲಿಯೂ ಆಸಕ್ತಿಯುಳ್ಳವರಾಗಿದ್ದರು. ರೂಮಿನಲ್ಲಿ ಇತರರು ಅಧ್ಯಯನದಲ್ಲಿ ನಿರತರಾಗಿರುತ್ತಿದ್ದರೆ ಅಂದಾನಿಯವರು ಮಾತ್ರ ಮಹಾನ್ ವ್ಯಕ್ತಿಗಳ ಭಾವಚಿತ್ರ, ರೇಖಾಚಿತ್ರಗಳನ್ನು ಚಿತ್ರಿಸಿ ಗೋಡೆಗಳಿಗೆ ಅಂಟಿಸುತ್ತಿದ್ದರು. ಸದಾ ಏನಾದರೂ ಮಾಡುತ್ತಲೇ ಇರುತ್ತಿದ್ದ ಇವರು ಶಾಲೆಗೆ ರಜೆ ಇದ್ದ ಸಂದರ್ಭದಲ್ಲಿ ಊರಿಗೆ ಬರುತ್ತಿದ್ದರು. ಯಾವುದಾದರೂ ಹೊಸ ಸಿನಿಮಾ ಬಂದರೆ ಊರಿನ ಜನರು ಎತ್ತಿನಗಾಡಿಯನ್ನು ಕಟ್ಟಿಕೊಂಡು ಶಾಹಾಬಾದಗೆ ಹೋಗುತ್ತಿದ್ದರು. ಅವರ ಜೊತೆಯಲ್ಲಿ ಅಂದಾನಿಯವರು ಹೋಗುತ್ತಿದ್ದರು. ಎ.ಸಿ.ಸಿ ಫ್ಯಾಕ್ಟರಿಯಲ್ಲಿ ಮತ್ತು ಊರಲ್ಲಿ ಚಿತ್ರ ಮಂದಿರಗಳಿದ್ದವು. ಅಲ್ಲಿ ಹೋದ ಮೇಲೆ ಮೊದಲು ಊರಿನ ಜನ ಸಂತೆ ಮಾಡಿಕೊಳ್ಳುತ್ತಿದ್ದರು. ಅಂದಾನಿಯವರು ಅಲ್ಲಿ ಸಿಗುವಂತಹ ವಸ್ತುಗಳು ಮತ್ತು ತಿಂಡಿ ತಿನಿಸುಗಳನ್ನು ಖರೀದಿಸಿ, ಸಂತೆಯಲ್ಲಿ ಸುತ್ತಾಡಿಕೊಂಡು ಸಾಯಂಕಾಲ ಸಿನಿಮಾ ನೋಡಿಕೊಂಡು ಎತ್ತಿನಗಾಡಿ ಕೊರಳು ಕಟ್ಟಿಕೊಂಡು ಊರಿಗೆ ಬರಬೇಕಾದರೆ ರಾತ್ರಿ ಹನ್ನೆರಡು ಘಂಟೆಯಾಗುತ್ತಿತ್ತು.

ಅಂದಾನಿಯವರು ಹೇಳುವಂತೆ ಮೊದಲು ನೋಡಿದ ಸಿನಿಮಾ ಅಂದರೆ 'ನಾಗಿನ್', '೪೨೦', 'ಆವಾರಾ' ಅವು ಶಹಾಬಾದ 'ತಿರಂದರ' ಚಿತ್ರಮಂದಿರದಲ್ಲಿ ನೋಡಿದ್ದು. ಎಲ್ಲವೂ ಕಪ್ಪು ಬಿಳುಪು ಸಿನಿಮಾಗಳಾಗಿದ್ದವು. ಆ ಕಾಲದ ಚಿತ್ರಮಂದಿರ ಚಾರ್ಜು ನಿಜಾಮರ ಎರಡು ಅಣೆ. ಕ್ವಾಯಿನ್‌ಗಳು ಮಧ್ಯದಲ್ಲಿ ತೂತು ಇರತ್ತಿದ್ದವು. ಅವುಗಳನ್ನು ನಾವು ಬೆರಳಿಗೆ ಹಾಕಿಕೊಂಡು ಜಾತ್ರೆಗೆ, ಸಂತೆಗೆ ಹೋಗುತ್ತಿದ್ದೆವು. ಈ ಕ್ವಾಯಿನ್‌ಗಳು ಬಿಜಾಪುರ ಕಡೆಗೆ ನಡೆಯುತ್ತಿರಲಿಲ್ಲ. ಅವರು ಇದಕ್ಕೆ ಮೊಘಲ ಕ್ವಾಯಿನ್‌ಗಳು ಎಂದುಕರೆಯುತ್ತಿದ್ದರು.[೧೪]

ಸಂತೆ ಮಾಡಬೇಕಾದರೆ ಗುಲಬರ್ಗಾಕ್ಕೆ ಹೋಗದೆ ಶಾಹಾಬಾದಕ್ಕೆ ಹೋಗುತ್ತಿದ್ದರು. ಆಗ ಶಹಾಬಾದ ಬಹಳ ಪ್ರಸಿದ್ಧಿಯಾಗಿತ್ತು. ಸಿಮೆಂಟ್ ಉತ್ಪಾದನೆಯಲ್ಲಿ ಗುಲಬರ್ಗಾ ಜಿಲ್ಲೆಯು ಇಡೀ

ರಾಷ್ಟ್ರದಲ್ಲಿಯೇ ಪ್ರಸಿದ್ಧಿ ಪಡೆದಿದೆ. 'ಎಚ್.ಎಮ್.ಸಿ ಸಿಮೆಂಟ್ ಲಿಮಿಟಡ್ (ಶಾಹಾಬಾದ ಸಿಮೆಂಟ್ ವರ್ಕ್ಸ್) ಜಿಲ್ಲೆಯ ಮೊಟ್ಟ ಮೊದಲ ಸಿಮೆಂಟ್ ಕಾರ್ಖಾನೆಯಾಗಿದೆ. ಇದು ೧೯೨೫ರಲ್ಲಿ ಸ್ಥಾಪನೆಗೊಂಡಿತ್ತು.'೧೫ ಇದರಿಂದ ಅಲ್ಲಿಯ ಅನೇಕ ಜನರಿಗೆ ಕೆಲಸ ಸಿಕ್ಕಿತ್ತು ಹೀಗಾಗಿ ಎಲ್ಲ ಕಡೆಯಿಂದ ಜನ ಶಾಹಾಬಾದಕ್ಕೆ ಕೆಲಸಕ್ಕಾಗಿ ಬರುತ್ತಿದ್ದರು. ಇದರಿಂದ ಶಾಹಾಬಾದ ಒಂದು ದೊಡ್ಡ ಕೈಗಾರಿಕಾ ನಗರವಾಗಿ ಬೆಳೆದಿತ್ತು. ಇಲ್ಲಿಗೆ ಬಂದವರಿಗೆ ಒಂದಲ್ಲಾ ಒಂದು ಕೆಲಸ ಸಿಗುತ್ತಿದ್ದವು ಹಾಗಾಗಿ ಶಾಹಾಬಾದ ಒಂದು ಪ್ರಸಿದ್ಧ ಊರಾಗಿ ಮಾರ್ಪಟ್ಟಿತ್ತು. ಮಾರುವುದು ಕೊಳ್ಳುವುದಿದ್ದರೆ ಆಗ ಶಾಹಾಬಾದಕ್ಕೆ ಬರಬೇಕಾಗುತಿತ್ತು. ಮತ್ತು ಶಾಹಾಬಾದ ಕಿರಣಗಿಗೆ ಬಹಳ ಸಮೀಪ ಇತ್ತು. ಊರು ಆರ್ಥಿಕವಾಗಿ ಶ್ರೀಮಂತವಾಗಿತ್ತು. ಬಡತನ ಅನ್ನುವುದು ಬಹಳ ಇರಲಿಲ್ಲ. ಅನುಕೂಲಸ್ಥರು ಇದ್ದರು. ಕಿರಣಗಿಯಲ್ಲಿ ಫಲವತ್ತಾದ ಕರಿಮಣ್ಣಿನ ಭೂಮಿ ಇರುವುದರಿಂದ ಅಲ್ಲಿ ಬೆಳೆಗಳು ತುಂಬಾ ಇಳುವರಿ ಬರುತ್ತಿದ್ದವು. ಹೀಗಾಗಿ ಊರು ಆರ್ಥಿಕವಾಗಿ ಚೆನ್ನಾಗಿತ್ತು.

ಶಾಲೆಯ ರಜೆಗಳು ಮುಗಿದ ಮೇಲೆ ಮತ್ತೆ ಗುಲಬರ್ಗಾಕ್ಕೆ ಹೋಗುತ್ತಿದ್ದರು ಕಿರಣಗಿಯ ಬಹಳಷ್ಟು ಜನ ಗುಲಬರ್ಗಾದಲ್ಲಿ ಶಾಲೆ ಕಲಿಯುತ್ತಿದ್ದರು. ಕಡಿಮೆ ಎಂದರೂ ಇಪ್ಪತ್ತು ಜನ ಕಿರಣಗಿಯವರು ಇರುತ್ತಿದ್ದರು. ಹೀಗಾಗಿ ನಾಲ್ಕು ಅಥವಾ ಐದು ಜನ ಕೂಡಿಕೊಂಡು ಹೋಗುವುದಕ್ಕೆ ಬರುವುದಕ್ಕೆ ಟಾಂಗಾನೇ ಮುಖ್ಯಸಾರಿಗೆ ಸಾಧನವಾಗಿತ್ತು. ಕೆಲವೊಮ್ಮೆ ಸೈಕಲಲ್ಲಿ ಹೋಗುತ್ತಿದ್ದರು. ಆಗ ರಸ್ತೆಗಳು ಅಷ್ಟು ಸರಿಯಾಗಿ ಇರಲಿಲ್ಲ. ಗುಲಬರ್ಗಾದಿಂದ ಕಿರಣಗಿ ೨೫ ಕಿಲೋಮೀಟರ್ ದೂರ ಇರುವುದರಿಂದ ಹೋಗುವುದಕ್ಕೆ ನಾಲ್ಕು ಐದು ಗಂಟೆ ಬೇಕಾಗುತ್ತಿದ್ದವು. ಬೆಳಿಗ್ಗೆ ಏಳು ಗಂಟೆಗೆ ಬಿಟ್ಟರೆ ಹನ್ನೊಂದು ಘಂಟೆಗೆ ಬಂದು ಶಾಲೆಗೆ ತಲುಪುತ್ತಿದ್ದರು. ಎರಡು ಅಥವಾ ಮೂರು ದಿನಗಳು ಶಾಲೆಗೆ ರಜೆಗಳಿದ್ದರೆ ಸೈಕಲಲ್ಲಿ ಹೋಗುತ್ತಿದ್ದರು. ರಜೆಗಳು ಮುಗಿದ ಮೇಲೆ ಊರಿಂದ ಬರುವಾಗ ಮನೆಯಿಂದ ಬುತ್ತಿ ತರುತ್ತಿದ್ದರು. ರಸ್ತೆಯಲ್ಲಿ ಎಲ್ಲಾದರೂ ಹಳ್ಳ ಇದ್ದರೆ ಊಟ ಮಾಡಿಕೊಂಡು ಮತ್ತೆ ಸೈಕಲ್ಲೇರಿ ಹನ್ನೊಂದು ಘಂಟೆಗೆ ಬಂದು ತಲುಪುತ್ತಿದ್ದರು. ಹಳ್ಳಿಯ ವಾತಾವರಣ ಬಹಳ ಆನಂದಿಸಿದ್ದೇನೆ. ಮತ್ತೆ ಹಳ್ಳಿಯ ವಾತಾವರಣ ಅಂದರೆ ನನಗೆ ಬಹಳಷ್ಟು ಇಷ್ಟ ಆಗುತ್ತಿತ್ತು'.[೧೬] ಎಂದು ಅಂದಾನಿಯವರು ಹೇಳುತ್ತಾರೆ. ಶಾಲೆಯ ರಜೆಯ ದಿನಗಳಲ್ಲಿ ಹೊಲಗಳಿಗೆ ಹೋಗುವುದು ಎತ್ತು, ಎಮ್ಮೆ, ಆಕಳಗಳನ್ನು ಮೇಯಿಸುವುದು. ಕುದುರೆಗಳ ಮೇಲೆ ಓಡಾಡುವುದು ಮತ್ತು ಹಳ್ಳಿಯ ಅಂದರೆ ಅಂದಾನಿಯವರಿಗೆ ಬಹಳಷ್ಟು ಪ್ರೀಯವಾಗಿತ್ತು.

ಹಬ್ಬ ಹರಿದಿನಗಳು ಬಂದರೆ ಮನೆಯಲ್ಲಿ ಚಿತ್ರ ಬಿಡಿಸುವುದು ಮತ್ತು ದೀಪಾವಳಿಯಲ್ಲಿ ಅಂಗಡಿಗಳಲ್ಲಿ ಲಕ್ಷ್ಮೀಚಿತ್ರ ಬಿಡಿಸಿ ಶುಭಲಾಭ ಅಂತ ಬರೆಯುವುದು. ಹೂ, ಗಿಡಗಳನ್ನು, ಪಕ್ಷಿಗಳನ್ನು ಚಿತ್ರಿಸುವಲ್ಲಿ ಹಾಗೂ ಜನರ ಮಧ್ಯೆಯೂ ತಲ್ಲೀನರಾಗುತ್ತಿದ್ದರು. ಸ್ತ್ರೀಯ ಕೈಯಿಂದ ಹೂವು ಸುರಿಯುತ್ತಿರುವ ಚಿತ್ರ ಎಷ್ಟೊಂದು ನಕಲು ಮಾಡಿದ್ದರೆಂದರೆ, ಅದನ್ನು ನೋಡದೇ ಬಿಡಿಸುತ್ತಿದ್ದರು. ಊರಲ್ಲಿ ಎಲ್ಲಾ ಅಂಗಡಿಗಳಲ್ಲಿ ಈ ಚಿತ್ರಗಳನ್ನೇ ಬಿಡಿಸುತ್ತಿದ್ದರು. ಬಿಡಿಸಿದ ನಂತರ ಅಂಗಡಿಯವರು ಒಂದು ಬಿಸ್ಕೆಟ್ ಪ್ಯಾಕೇಟ್ ಕೊಡುತ್ತಿದ್ದರು.

ಅಂದಾನಿಯವರು ೫ನೇ ತರಗತಿಯಲ್ಲಿದ್ದಾಗ ಆಗ ಬಂಕೂರಕ ಎಲ್ಲಾ ವಿದ್ಯಾರ್ಥಿಗಳಿಂದ ನೆಹರು, ಗಾಂಧೀಜಿ, ವಲ್ಲಭಬಾಯಿ ಪಟೇಲ, ಹೀಗೆ ಅನೇಕ ಮಹಾನ್ ವ್ಯಕ್ತಿಗಳ ಭಾವ ಚಿತ್ರಗಳನ್ನು ಫುಲ್ ಇಂಪಿರಿಯಲ್ ಅಳತೆಯ ಕಾಗದ ಮತ್ತು ಕ್ಯಾನವಸ್ ಮೇಲೆ ಚಿತ್ರ ರಚನೆ ಮಾಡಿಸುತ್ತಿದ್ದರು. ಇಂಡಿಯನ್ ಇಂಕನಲ್ಲಿ ಕುಂಚ ಅದ್ದಿ ನಂತರ ಸ್ವಲ್ಪ ಡ್ರೈಮಾಡಿ ಕ್ಯಾನವಾಸ್ ಬಟ್ಟೆಯ ಮೇಲೆ ತಿಕ್ಕಿ ತಿಕ್ಕಿ ಫೋಟೊಗ್ರಾಫಿ ಫಿನ್ಸಿಂಗ್ ಮಾಡಿದ ಹಾಗೆ ಚಿತ್ರರಚಿಸುವುದನ್ನು ಕಲಿಸುತ್ತಿದ್ದರು. ಅಂದಾನಿಯವರಿಗೆ ಆರನೆಯ ಮತ್ತು ಏಳನೆಯ ತರಗತಿಗೆ ಬಂದ ಮೇಲೆ ಬಂಕೂರಕರ್ ಗುರುಗಳ ಪ್ರಭಾವ ಹೆಚ್ಚಾಯಿತು. ಅವರು ಯಾವಾಗಲು ಬ್ಲ್ಯಾಕ್ ಆ್ಯಂಡ್ ವೈಟ್ ಚಿತ್ರಗಳನ್ನೇ ಹೆಚ್ಚು ಮಾಡಿಸುತ್ತಿದ್ದರು. ಗುಲಬರ್ಗಾಕ್ಕೆ ಬಂದ ಮೇಲೆ ಇಂಡಿಯನ್ ಇಂಕ್ ಉಪಯೋಗಿಸಲು ಪ್ರಾರಂಭಮಾಡಿದರು. ಬಣ್ಣಗಳನ್ನು ಖರೀದಿಸಲು ಆಗ 'ಆಶಾ ಜನರಲ್ ಸ್ಟೋರ್' ಅಂತ ಇತ್ತು. ಡ್ರಾಯಿಂಗ್ ಉಪಕರಣಗಳನ್ನು ಕೊಳ್ಳಲು ಈ ಅಂಗಡಿಗೆ ಬರುತ್ತಿದ್ದರು. ಇಂಡಿಯನ್ ಇಂಕ್ ಚೈನಾದಿಂದ ಬರುತ್ತಿದ್ದವು. ಅಂದಾನಿಯವರು ಇಂಡಿಯನ್ ಇಂಕನಿಂದಲೇ ಬಹಳಷ್ಟು ಚಿತ್ರಗಳನ್ನು ರಚಿಸಿದ್ದಾರೆ. ಅಂಗಡಿಗೆ ಹೋದಾಗ ಒಮ್ಮೆಲೇ ಎರಡು ಮೂರು ಇಂಡಿಯನ್ ಇಂಕ್ ಬಾಟಲಿಗಳನ್ನು ಖರೀದಿಸುತ್ತಿದ್ದರು. ಆಗ ಅದರ ಬೆಲೆ ಒಂದು ರೂಪಾಯಿ ಆಗ ಜಲವರ್ಣ ಸಿಗುತ್ತಿದ್ದವು. ಅದರಲ್ಲಿ ಚೆನ್ನಾಗಿರುವುದೆಂದರೆ ಗಿಟಾರ್ ವರ್ಣ. ಬೆಲೆ ೬ ರೂಪಾಯಿ ಅವುಗಳನ್ನು ಖರೀದಿ ಮಾಡುತ್ತಿದ್ದರು. ಆಗ ಜಲವರ್ಣದಲ್ಲಿ ಗಿಟಾರ್ ವರ್ಣ ಹೆಚ್ಚು ಬಳಸುತ್ತಿದ್ದರು. ಈ ವರ್ಣದಿಂದ ರಚಿಸಿದಂತಹ ಕಲಾಕೃತಿಗಳು ಬಹಳ ಸುಂದರವಾಗಿ ಮೂಡಿ ಬರುತ್ತಿದ್ದವು. ಜೆ.ಎಸ್ ಖಂಡೇರಾವ್ ಅವರು ರಚಿಸಿದ ನಿಸರ್ಗ ಚಿತ್ರಣಗಳಲ್ಲಿ ಹೆಚ್ಚಿನವು ಎಲ್ಲಾ ಗಿಟಾರ್ ವರ್ಣದಿಂದಲೇ ರಚಿಸಿದ್ದಾರೆ. ಎಂದು ಅಂದಾನಿಯವರು ಹೇಳುತ್ತಾರೆ. ಈ ಚಿತ್ರದಲ್ಲಿ ಬಳಸಿರುವಂತಹ ವರ್ಣಗಳು ಉತ್ತಮ ಗುಣಮಟ್ಟದಾಗಿದ್ದವು. ಗಿಟಾರ್ ವರ್ಣ ಜರ್ಮನ್ ತಯಾರಿಕೆಯಾಗಿತ್ತು. ಗಿಟಾರ್ ವರ್ಣ ಮತ್ತು ಇಂಡಿಯನ್ ಇಂಕ್ ಇವು ಅಂದಾನಿಯವರ ಇಷ್ಟವಾದ ವರ್ಣಗಳಾಗಿದ್ದವು.

ಮುಂದೆ ೯ನೇ ತರಗತಿಗೆ ಬಂದ ಮೇಲೆ ಪೋಸ್ಟರ್ ವರ್ಣ ಬಳಸಲು ಪ್ರಾರಂಭಿಸಿದರು. ಮೊದಲು ಹೆಚ್ಚಾಗಿ ಪೋಸ್ಟರ್ ವರ್ಣವನ್ನು ಖ್ಯಾತ ಕಲಾವಿದರಾದ ಎಸ್.ಎಂ. ಪಂಡಿತರು ಹೆಚ್ಚು ಬಳಸುತ್ತಿದ್ದರು. ಈ ವರ್ಣದಿಂದ ಅನೇಕ ನೈಜ ಚಿತ್ರಗಳನ್ನು ಅತ್ಯಂತ ಸುಂದರವಾಗಿ ರಚಿಸಿದ್ದಾರೆ. ಇದರಂದಾಗಿ ಎಲ್ಲಾ ಜನರು ಪೋಸ್ಟರ್ ವರ್ಣವನ್ನು ಬಳಸಲು ಪ್ರಾರಂಭಿಸಿದರು.

ಒಕ್ಕಲು ಮನೆತನದಲ್ಲಿ ಜನಿಸಿದರೂ ಅಂದಾನಿವರಿಗೆ ಪೆನ್ಸಿಲ್ಲು, ಕಾಗದ, ಬಣ್ಣ ಯಾವುದಕ್ಕೂ ಕೊರತೆ ಇರುತ್ತಿರಲಿಲ್ಲ. ಏನಾದರೂ ಚಿತ್ರಿಸಬೇಕೆಂದು ಮನಸ್ಸಿನಲ್ಲಿ ಮೂಡಿದ್ದೇ ತಡ, ಅದನ್ನು ಪೂರ್ಣಗೊಳಿಸದೇ ಬಿಡುತ್ತಿರಲಿಲ್ಲ ಬೇಕೆಂದಾಗ ಸಾಕಾಗುವಷ್ಟು ಕ್ಯಾನ್‌ವಾಸ್ ಸಿದ್ದಗೊಳಿಸುವುದು, ಎಲ್ಲ ರೀತಿಯ ಸಾಮಗ್ರಿಗಳನ್ನು ಸಂಗ್ರಹಿಸುವುದು, ಜೊತೆಗೆ ಕಲಾ ಪುಸ್ತಕಗಳನ್ನು ಸಂಗ್ರಹಿಸುವುದು ಅವರ ಪ್ರಾರಂಭಿಕ ಕಲಾಬದುಕಿನ ಮಹತ್ವದ ಹೆಜ್ಜೆಯಾಗಿತ್ತು.

'ಒಮ್ಮೆ ಬಾಂಬೆ ಜೆ.ಜೆ ಸ್ಕೂಲ್ ಆಫ್ ಆರ್ಟ ಕಲಾವಿದರ ಕಲಾ ಪ್ರದರ್ಶನ ಗುಲಬರ್ಗಾದಲ್ಲಿ ನಡೆದಿತ್ತು. ಆಗಲೇ ಆಳಂದಕರ್ ಅವರು ಜೆ.ಜೆ. ಸ್ಕೂಲ್ ಆಫ್ ಆರ್ಟನಲ್ಲಿ ಕಲಿತು ಬಂದಿದ್ದರು. ಅವರೇ ಗುಲಬರ್ಗಾದಲ್ಲಿ ಕಲಾ ಪ್ರದರ್ಶನದ ವ್ಯವಸ್ಥೆ ಮಾಡಿಸಿದ್ದರು. ಆಗ ಬಂಕೂರಕರ ಅವರು ಆ ಚಿತ್ರ ಕಲಾ ಪ್ರದರ್ಶನ ನೋಡುವುದಕ್ಕೆ ಕರೆದುಕೊಂಡು ಹೋಗಿದ್ದರು. ಈ ಪ್ರದರ್ಶನದಲ್ಲಿ ನೈಜ ಕಲಾಕೃತಿಗಳು, ಪ್ರಕೃತಿ ಚಿತ್ರ, ಭಾವಚಿತ್ರ, ಉಮರ್ ಖಯಾಮ, ಲೈಲಾ ಮಜ್ನು ಸರಣಿ ಕೆಲವು ಸಿನಿಮಾ ಕಥೆಗಳ ಮೇಲಿನ ಚಿತ್ರಗಳು, ಅಲ್ಲದೇ ಗ್ರುಪ್ ಡ್ಯಾನ್ಸ್, ಫೋಕ್ ಡ್ಯಾನ್ಸಗಳಿಗೆ ಸಂಬಂಧಿಸಿದ ಕಲಾಕೃತಿಗಳು ಪ್ರದರ್ಶಿಸಲ್ಪಟ್ಟಿದ್ದವು.'[೧೭] ಈ ಎಲ್ಲಾ ಕಲಾಕೃತಿಗಳಿಗೆ ಚೌಕಟ್ಟು ಹಾಕಿ ನೀಟಾಗಿ ಪ್ರದರ್ಶನ ಮಾಡಿದ್ದರು. ಅದರಲ್ಲಿ ಕ್ರಿಯೇಟಿವ್ ಪೇಂಟಿಂಗ್ಸ್ ಹೆಚ್ಚು ಕಂಡುಬರುತ್ತಿರಲಿಲ್ಲ. ಜೆ.ಜೆ ಕಲಾಶಾಲೆಯಲ್ಲಿ ಬ್ರಿಟೀಷರ ಕಲಾ ಭೋಧನಾ ಪದ್ದತಿ ಇರುವುದರಿಂದ ಹೆಚ್ಚಾಗಿ ನೈಜ ಚಿತ್ರ ರಚನೆಗೆ ಮಹತ್ವ ಕೊಟ್ಟಿದ್ದರು. ಇವುಗಳೇ ಆಗ ಅಂದಾನಿಯವರ ಮೇಲೆ ಪ್ರಭಾವ ಬೀರಿದವು. ಇದಲ್ಲದೇ ಇನ್ನಿತರ ಕಲಾ ಪ್ರದರ್ಶನಗಳು ಒಂದಿಲ್ಲ ಒಂದು ರೀತಿಯಿಂದ ಪ್ರಭಾವ ಬೀರುತ್ತಲೇ ಬಂದವು ಎಂದು ಅಂದಾನಿಯವರು ಹೇಳುತ್ತಾರೆ.

ಅಂದಾನಿಯವರು ಎಂಟನೆಯ ತರಗತಿಯಲ್ಲಿದ್ದಾಗ ಜೆ.ಎಸ್.ಖಂಡೇರಾವ್ ಅವರು ಶರಣಬಸವೇಶ್ವರ ಪ್ರೌಢಶಾಲೆಗೆ ಆಗಾಗ ಬರುತ್ತಿದ್ದರು. ಮುಂಬೈ ಜೆ.ಜೆ. ಕಲಾಶಾಲೆಯಲ್ಲಿ ಕಲಿತ ಇವರಿಗೆ ಗುಲಬರ್ಗಾದಲ್ಲಿ ಒಂದು ಕಲಾಶಾಲೆಯನ್ನು ತೆರೆಯಬೇಕೆಂಬ ಹಂಬಲ ಹೆಚ್ಚಾಗಿತ್ತು. ಅದಕ್ಕೆಂದೇ ಅವರು ಆಗಾಗ ಶರಣಬಸವೇಶ್ವರ ಪ್ರೌಢಶಾಲೆಗೆ ಬರುತ್ತಿದ್ದರು. ಅಲ್ಲಿ ಬಂಕೂರಕರ ಮಾಸ್ತರರು ವಿದ್ಯಾರ್ಥಿಗಳಿಗೆ ಚಿತ್ರಕಲೆಯನ್ನು ಹೇಳಿಕೊಡುತ್ತಿದ್ದರು. ಇವರೊಂದಿಗೆ ಸೇರಿ ಅಲ್ಪ ಸ್ವಲ್ಪ ಚಿತ್ರಕಲೆಯ ಬಗ್ಗೆ ಹೇಳಿಕೊಡಲು ಪ್ರಾರಂಭಿಸಿದರು. ಇವರು ಯಥಾದರ್ಶನ ಚೆನ್ನಾಗಿ ಬಲ್ಲವರಾಗಿದ್ದರು. ಈ ವಿಷಯವನ್ನು ಅಷ್ಟು ಚೆನ್ನಾಗಿ ಅಲ್ಲಿ ಯಾರೂ ಹೇಳಿಕೊಡುವವರು ಇರಲಿಲ್ಲ. ಈ ವಿಷಯದಲ್ಲಿ ಹೆಚ್ಚು ಜನ ವಿದ್ಯಾರ್ಥಿಗಳು ಅನುತ್ತೀರ್ಣರಾಗುತ್ತಿದ್ದರು. ಆ ಉದ್ದೇಶದಿಂದಲೇ ಖಂಡೇರಾವ್‌ರವರು ಆಗಾಗ ಶರಣಬಸವೇಶ್ವರ ಪ್ರೌಢಶಾಲೆಗೆ ಹೋಗಿ ವಿದ್ಯಾರ್ಥಿಗಳಿಗೆ ಯಥಾದರ್ಶನದ ಬಗ್ಗೆ ಪಾಠ ಹೇಳಿಕೊಡುತ್ತಿದ್ದರು. ಆ ಸಂದರ್ಭದಲ್ಲಿ ವ್ಹಿ.ಜಿ.ಅಂದಾನಿ, ಬಸವರಾಜ ಉಪ್ಪಿನ, ಮಂಗಳ ಪಂಡಿತ, ಮೋಹನ ಸೀತನೂರರಂತಹ ವಿದ್ಯಾರ್ಥಿಗಳು ಕಲೆಯ ಕಡೆಗೆ ಹೆಚ್ಚು ಆಸಕ್ತಿವಹಿಸ ತೊಡಗಿದರು.

ಖಂಡೇರಾವ್‌ರವರು ಕೆಲವು ಆಸಕ್ತ ವಿದ್ಯಾರ್ಥಿಗಳಿಗೆ ನಾನು ಜೂನ್ ತಿಂಗಳಲ್ಲಿ ಡ್ರಾಯಿಂಗ್ ತರಗತಿಗಳನ್ನು ಮನೆಯಲ್ಲಿ ಪ್ರಾರಂಭ ಮಾಡುತ್ತೇನೆ. ಎಂದು ಹೇಳಿ ಜೂನ್ ಒಂದ ರಿಂದ ವ್ಹಿ.ಜಿ. ಅಂದಾನಿ, ಬಸವರಾಜ ಉಪ್ಪಿನ, ಶಿವಶರಣ ಉಪ್ಪಿನ, ಮಂಗಳ ಪಂಡೀತ್, ಮೋಹನ ಸೀತನೂರ ಹೀಗೆ ಐದಾರು ವಿದ್ಯಾರ್ಥಿಗಳಿಂದ ತರಗತಿ ಪ್ರಾರಂಭಿಸಿರು. ಎಲ್ಲರೂ ಅವರ ಮನೆಗೆ ಹೋಗಿ ಅಲ್ಲಿ ಎಂಟರಿಂದ ಒಂಭತ್ತು ಘಂಟೆಯವರೆಗೆ ಕಲೆಯ ವಿಶೇಷ ತರಗತಿಗೆ ಹಾಜರಾಗಿ ನಂತರ ಹನ್ನೊಂದು ಘಂಟೆಗೆ ಶಾಲೆಗೆ ಹೋಗುತ್ತಿದ್ದೆವು ಎಂದು ತಮ್ಮ ನೆನಪುಗಳನ್ನು ಬಸವರಾಜ ಉಪ್ಪಿನವರು

ಹಸಿರಾಗಿಸುತ್ತಾರೆ. ಅಲ್ಲಿ 'ಭಾವಚಿತ್ರ, ರೇಖಾಚಿತ್ರ, ರಚಿಸುವುದನ್ನು ಮುಖ್ಯವಾಗಿ ಖಂಡೇರಾವ್‌ರು ಹೇಳಿಕೊಡುತ್ತಿದ್ದರು. ಭಾವಚಿತ್ರ ರಚನೆಗಾಗಿ ಫೋಟೊ ತೋರಿಸಿ ಚಿತ್ರ ರಚನೆ ಮಾಡಲು ಹೇಳುತ್ತಿದ್ದರು. ಎಲ್ಲರಿಗೂ ಅರ್ಥವಾಗುವ ರೀತಿಯಲ್ಲಿ ಭೋದನೆ ಮಾಡುತ್ತಿದ್ದರು.'[೧೮] ಹೀಗೆ ಎರಡು ವರ್ಷಗಳ ಕಾಲ ಜೆ.ಎಸ್.ಖಂಡೇರಾವ್ ಅವರ ಮನೆಯಲ್ಲಿ ಚಿತ್ರಕಲೆಯ ವಿಶೇಷ ತರಗತಿ ಕಲಿತ ಬಗ್ಗೆ ಬಸವರಾಜ ಉಪ್ಪಿನನವರು ವಿವರಿಸುತ್ತಾರೆ.

ಎಂಟು ಮತ್ತು ಒಂಭತ್ತನೆಯ ತರಗತಿಯಲ್ಲಿ ಲೋಯರ್ ಮತ್ತು ಹೈಯರ್ ಗ್ರೇಡ್ ಪರೀಕ್ಷೆಯನ್ನು ಎಸ್. ಬಿ.ಹೈಸ್ಕೂಲಲ್ಲಿ ಪ್ರಥಮ ಶ್ರೇಣಿಯಲ್ಲಿ ಪಾಸಾದರು. ಈ ಹಂತದಲ್ಲಿ ಶಾಲೆಯಲ್ಲಿ ನಡೆಯುವ ಕಲಾಸ್ಪರ್ಧೆ, ರಾಜ್ಯಮಟ್ಟ ಮತ್ತು ರಾಷ್ಟ್ರಮಟ್ಟದ ಕಲಾಸ್ಪರ್ಧೆಯಲ್ಲಿ ಭಾಗವಹಿಸಿ ಅನೇಕ ಪ್ರಶಸ್ತಿಗಳನ್ನು ಪಡೆದುಕೊಂಡು ಬಾಲ್ಯದಲ್ಲಿಯೇ ಕಲೆಯನ್ನು ಮೈಗೂಡಿಸಿಕೊಂಡರು. ಈ ಸಂದರ್ಭದಲ್ಲಿ ಅಂದಾನಿಯವರು ಪಿತೃ ವಿಯೋಗದಿಂದ ನಲುಗಬೇಕಾಯಿತು. ರೋಗದಿಂದ ಬಳಲುತ್ತಿದ್ದ ತಂದೆ ಗುರಪ್ಪನವರು(೧೯೬೨ರಲ್ಲಿ) ತೀರಿಕೊಂಡರು. ಏನೂ ಅರಿಯದ ಬಾಲಕನಿಗೆ ಆಕಾಶವೇ ಕಳಚಿ ನೆತ್ತಿಯ ಮೇಲೆ ಬಿದ್ದಂತಾಯಿತು. ತಂದೆಯ ಆಸರೆಯ ನೆರಳಿನಲ್ಲಿ ಬೆಳೆಯಬೇಕಾದ ಬಾಲಕ ನೊಂದು ಬೆಂದು ತಾಯಿಯ ಮಡಿಲಲ್ಲಿ ಬೆಳೆಯಬೇಕಾಯಿತು. ಗಂಡನನ್ನು ಕಳೆದುಕೊಂಡ ನೀಲಗಂಗಮ್ಮನವರು ಅಂದಾನಿಯವರನ್ನು ತಂದೆ-ತಾಯಿಯಾಗಿ ಕಣ್ಣಲ್ಲಿ ಕಣ್ಣಿಟ್ಟು ಯಾವುದಕ್ಕೂ ಕುಂದು ಕೊರತೆ ಬಾರದಂತೆ ಬೆಳೆಸಿದರು.

ಅಂದಾನಿಯವರು ಒಂಭತ್ತನೆಯ ತರಗತಿಯಲ್ಲಿ ಓದುತ್ತಿರುವಾಗ "ಇಲಸ್ಟ್ರೇಟೆಡ್ ವೀಕ್ಲಿ" ಏರ್ಪಡಿಸಿದ ಅಖಿಲ ಭಾರತ ಮಟ್ಟದ ಕಲಾಸ್ಪರ್ಧೆಯಲ್ಲಿ ಬಹುಮಾನ ದೊರೆತದ್ದು ಅವರ ಪ್ರತಿಭೆಗೆ ದೊರೆತ ಮೊಟ್ಟಮೊದಲ ಪ್ರತಿಫಲವಾಗಿತ್ತು. ಅದರಿಂದ ಸ್ಫೂರ್ತಿಗೊಂಡ ಅಂದಾನಿಯವರಲ್ಲಿ ಕಲಾಭಿರುಚಿ, ಕಲಾಶ್ರದ್ಧೆ ದಿನದಿಂದ ದಿನಕ್ಕೆ ದ್ವಿಗುಣಗೊಳ್ಳುತ್ತಾ ಸಾಗಿತು. ಇಲಸ್ಟ್ರೇಟಡ್ ವೀಕ್ಲಿ ವಾರಪತ್ರಿಕೆ ಭಾರತದಲ್ಲಿ ಪ್ರಸಿದ್ದ ಪತ್ರಿಕೆಯಾಗಿತ್ತು. ಪ್ರತಿ ವರ್ಷ 'ಯಂಗ್ ಇಂಡಿಯಾ ಆರ್ಟಿಸ್ಟ್ ಕಾಂಪಿಟೇಶನ್' ನಡೆಯುತ್ತಿದ್ದವು. ಎಸ್.ಬಿ. ಹೈಸ್ಕೂಲಲ್ಲಿ ಕಲಿಯುತ್ತಿರುವಾಗ ಕೆಲವು ವಿದ್ಯಾರ್ಥಿಗಳ ಚಿತ್ರಗಳನ್ನು ನಮ್ಮಲ್ಲಿದ್ದ ಸಾಸ್ತೂರ ಮೇಸ್ತ್ರು ಸ್ಪರ್ಧೆಗಾಗಿ ಕಳುಹಿಸಿಕೊಟ್ಟಿದ್ದರು. ಇಂಗ್ಲೀಷ್ ಅಷ್ಟಾಗಿ ನಮಗೆ ಓದುವುದಕ್ಕೆ ಬರುತ್ತಿರಲಿಲ್ಲ ಹಾಗಾಗಿ ಪತ್ರಿಕೆ ನಮಗೆ ಅರ್ಥವಾಗುತ್ತಿರಲಿಲ್ಲ. ಎಂದು ಅಂದಾನಿಯವರು ಹೇಳುತ್ತಾರೆ. ಈ ಸ್ಪರ್ಧೆಯಲ್ಲಿ ಅಂದಾನಿಯವರು ಜಲವರ್ಣದಿಂದ ರಚಿಸಿದ ಪ್ರಕೃತಿ ಚಿತ್ರಕ್ಕೆ 'ಇಲಸ್ಟ್ರೇಟೆಡ್ ವೀಕ್ಲಿ' ಪ್ರಶಸ್ತಿ ಸ್ಕಿಕಿತ್ತು. ಇದರಿಂದ ಅಂದಾನಿಯವರು ಎಸ್.ಬಿ. ಹೈಸ್ಕೂಲಲ್ಲಿ ಪ್ರಸಿದ್ಧಿಯಾದರು. ಆಗ ಅದರ ಬಹುಮಾನವು ೧೫೦ ರೂಪಾಯಿಗಳಾಗಿತ್ತು. ಅದು ಆ ಕಾಲದಲ್ಲಿ ಬಹು ದೊಡ್ಡ ಮೊತ್ತ. ಭಾರತದ ಖ್ಯಾತ ಬರಹಗಾರರಾಗಿದ್ದ ಪಿ.ಎಸ್.ರಾಮನ್ ಅವರು ಈ ಕಲಾ ಸ್ಪರ್ಧೆಯನ್ನು ಏರ್ಪಡಿಸುತ್ತಿದ್ದರು. ಈ ಕಲಾ ಸ್ಪರ್ಧೆ ಐದಾರು ವರ್ಷಗಳಲ್ಲಿಯೇ ನಿಂತುಹೋಯಿತು. ಎಂಬುದಾಗಿ ತಮ್ಮ ಹೈಸ್ಕೂಲು ಹಂತದ ಕಲಾ ಚಟುವಟಿಕೆಗಳ ಬಗ್ಗೆ ಅಂದಾನಿಯವರು ತಿಳಿಸುತ್ತಾರೆ.

ಅಂದಾನಿಯವರು ಶರಣಬಸವೇಶ್ವರ ಪ್ರೌಢಶಾಲೆಯಲ್ಲಿ ಹತ್ತನೆಯ ತರಗತಿಯನ್ನು (೧೯೬೪ರಲ್ಲಿ) ಮುಗಿಸಿದರು. ಪ್ರಾಥಮಿಕ ಹಂತದಲ್ಲೇ ಚಿತ್ರಕಲೆಯಲ್ಲಿ ಆಸಕ್ತಿ ಹೊಂದಿದ್ದ ಇವರು ಹತ್ತನೇ ತರಗತಿ ನಂತರ ಕಲಾಕ್ಷೇತ್ರದಲ್ಲೇ ಮುಂದುವರಿಯಲು ಆಸಕ್ತರಾಗಿದ್ದರು. ಆದರೆ ಇವರ ಸಹೋದರರು ಇವನನ್ನು ಗುಲಬರ್ಗಾದಲ್ಲಿಯೇ ಬಿಟ್ಟರೆ ಇವನು ಚಿತ್ರಕಲೆಯಲ್ಲಿಯೇ ಮುಂದುವರಿಯುತ್ತಾನೆಂದು ಹೆದರಿ ಹುಬ್ಬಳ್ಳಿಯ ಪಿ.ಸಿ.ಜಾಬಿನ್ ಕಾಲೇಜಿನಲ್ಲಿ ವಿಜ್ಞಾನ ವಿಭಾಗಕ್ಕೆ ಸೇರಿಸುತ್ತಾರೆ. ಅಂದಾನಿಯವರ ಸಹೋದರರ ಒತ್ತಾಸೆಯೆಂದರೆ ಅಂದಾನಿಯವರಿಗೆ ವೈದ್ಯಕೀಯ ಶಿಕ್ಷಣ ಕೊಡಿಸುವುದಾಗಿತ್ತು. ಆದ್ದರಿಂದಲೇ ಅವರನ್ನು ಪಿ.ಸಿ. ಜಾಬಿನ್ ಕಾಲೇಜಿನಲ್ಲಿ ವಿಜ್ಞಾನ ವಿಭಾಗಕ್ಕೆ ಸೇರಿಸಿದ್ದರು. ಆದರೆ ಹೆಸರಿಗಷ್ಟೇ ವಿಜ್ಞಾನ ವಿದ್ಯಾರ್ಥಿಯಾಗಿದ್ದ ಅಂದಾನಿಯವರು ಸಂಪೂರ್ಣವಾಗಿ ಚಿತ್ರಕಲೆಯಲ್ಲಿಯೇ ತೊಡಗಿಸಿಕೊಳ್ಳುತ್ತಾರೆ. ವಿಜ್ಞಾನವೆಂಬ ಕ್ಷೇತ್ರವನ್ನು ಆಯ್ದುಕೊಂಡ ಅವರ ಸ್ಥಿತಿ ಪ್ರವಾಹದ ವಿರುದ್ಧ ಈಜುವಂತಾಗಿತ್ತು. ಮನಸ್ಸಿನ ಸ್ಥಿತಿಯೂ ಕೋಲಾಹಲವನ್ನು ಉಂಟುಮಾಡುತ್ತಿತ್ತು. ಇಂತಹ ಸ್ಥಿತಿಯಲ್ಲಿ ಕ್ರಮೇಣ ಅವರ ಅದುವರೆಗೆ ಅವರ ವಳಗೆ ಅಡಗಿಕೊಂಡಿದ್ದ ಕಲೆಯ ಆಕಾಂಕ್ಷೆಗಳು ತಾವಾಗೆ ಹೊರಬಂದವು. ಹೀಗೆ ಅಂದಾನಿಯವರನ್ನು ಮತ್ತೆ ಚಿತ್ರಕಲೆಯಲ್ಲಿ ಮುಳುಗುವಂತೆ ಆಯಿತ್ತು.

ಅಂದಾನಿಯವರು ವಿಜ್ಞಾನ ವಿಷಯದಲ್ಲಿ ಆಸಕ್ತಿ ಇಲ್ಲದುದರಿಂದ ಅವರಿಗೆ ಅಲ್ಲಿ ವಿಷಯಗಳು ಕಷ್ಟವಾಗಿದ್ದವು. ವಿಜ್ಞಾನದಲ್ಲಿ ಹಲವಾರು ವಿಷಯಗಳಿದ್ದರೂ ಬಾಟನಿಯಲ್ಲಿ ಪ್ರಾಯೋಗಿಕ ರಿಕಾರ್ಡ್ ಬುಕ್ ಇದ್ದುದರಿಂದ ಈ ವಿಷಯದಲ್ಲಿ ಅಂದಾನಿಯವರಿಗೆ ಸ್ವಲ್ಪ ಹೆಚ್ಚಿನ ಆಸಕ್ತಿ ಇತ್ತು. ಆ ವಿಷಯಕ್ಕೆ ಸಂಬಂಧಿಸಿದಂತೆ ಕೆಲವು ಚಿತ್ರಗಳನ್ನು ಸುಂದರವಾಗಿ ಬಿಡಿಸಿದ್ದರು. ಇವರ ಚಿತ್ರಗಳನ್ನು ನೋಡಿದ ಅಲ್ಲಿನ ಗೌಡರ ಎಂಬ ಉಪನ್ಯಾಸಕಿ ಚೆನ್ನಾಗಿ ಚಿತ್ರಿಸಿದ್ದ ಕಾರಣ ಅವರ ಪುಸ್ತಕವನ್ನು ತಮ್ಮಲ್ಲಿನ ಸಂಗ್ರಹಣೆಗಾಗಿ ತೆಗೆದುಕೊಂಡರು. ಹೀಗೆ ಕಲೆಯಲ್ಲಿ ತುಂಬಾ ಆಸಕ್ತಿ ಹೊಂದಿದ್ದ ಅಂದಾನಿಯವರು ಆಗಾಗ ಪಾಟೀಲ ಪುಟ್ಟಪ್ಪನವರನ್ನು ಭೇಟಿಯಾಗುತ್ತಿದ್ದರು. ಆಗ ಪಾಟೀಲ ಪುಟ್ಟಪ್ಪನವರು 'ಪ್ರಪಂಚ' ಎಂಬ ಪತ್ರಿಕೆಯನ್ನು ನಡೆಸುತ್ತಿದ್ದರು. ಅಲ್ಲಿಗೆ ಹೋದಂತಹ ಸಂದರ್ಭದಲ್ಲಿ ಅವರಿಗೆ ತಾವು ಮಾಡಿದ ಕಲಾಕೃತಿಗಳನ್ನು ತೋರಿಸುತ್ತಿದ್ದರು. ಅವರು ರಾಜಕೀಯಕ್ಕೆ ಸಂಬಂಧಿಸಿದಂತೆ ಕೆಲವು ಚಿತ್ರಗಳನ್ನು ಮಾಡಿಕೊಡಲು ಹೇಳಿದ್ದರು. ಎಂಬುದಾಗಿ ಅಂದಾನಿಯವರು ತಮ್ಮ ನೆನಪುಗಳನ್ನು ಬಿಚ್ಚಿಡುತ್ತಾರೆ. ಪಾಟೀಲ ಪುಟ್ಟಪ್ಪನವರ ಸಂಪರ್ಕದಿಂದಾಗ ರಾಜಕೀಯಕ್ಕೆ ಸಂಬಂಧಿಸಿದ ಕೆಲವು ಚಿತ್ರಗಳನ್ನು ಬಿಡಿಸತೊಡಗಿದ್ದರು. ಇದಕ್ಕೆ ಪ್ರಭಾವ ಬೀರಿದವರೆಂದರೆ ಅಚರೇಕರ ಎಂಬ ಕಲಾ ಶಿಕ್ಷಕರು. ಅವರು ಬಾಂಬೆ ಕಲಾವಿದರ ಹಾಗೂ ಕೆಲವು ರಾಜಕೀಯ ವ್ಯಕ್ತಿಗಳ ಚಿತ್ರಗಳು, ಸ್ಮಾರಕಗಳ ಚಿತ್ರಗಳನ್ನು ಸಹಿತ ಮಾಡಿದ್ದರು. ಹೀಗಾಗಿ ಅವರ ಕಲಾಕೃತಿಗಳು ಅಂದಾನಿಯವರಿಗೆ ಬಹಳಷ್ಟು ಮೆಚ್ಚುಗೆ ಆಗುತ್ತಿದ್ದವು. ಇವರ ಚಿತ್ರಗಳು ಅಂದಾನಿಯವರ ಮೇಲೆ ಸಾಕಷ್ಟು ಪ್ರಭಾವ ಬೀರಿದವು. ಕಲೆಯತ್ತ ಮನಸ್ಸು ಧಾವಿಸಿದ್ದರಿಂದ ಪಿ.ಯು.ಸಿ.ಯ ಓದು ಅಲ್ಲಿಗೇ ನಿಂತಿತು.

## ಕಲಾಶಿಕ್ಷಣ

ಕೊನೆಗೆ ಮನೆಯ ಹಿರಿಯರು ಅಂದಾನಿಯವರ ಮನಸ್ಥಿತಿ ಅರಿತು ಅವರಾಸೆಯಂಯೇ ಗುಲಬರ್ಗಾದಲ್ಲಿ ಜೆ.ಎಸ್. ಖಂಡೇರಾವ್ ಅವರು ಆಗತಾನೇ ಆರಂಭಿಸಿದ್ದ (೧೯೬೫) 'ದಿ ಐಡಿಯಲ್ ಫೈನ್ ಆರ್ಟ್ ಸಂಸ್ಥೆ' ಗೆ ಪ್ರವೇಶ ದೊರಕಿಸಿಕೊಟ್ಟರು. ದಿ ಐಡಿಯಲ್ ಫೈನ್ ಆರ್ಟ್ ಸಂಸ್ಥೆಯ ಮೊದಲ ತಂಡದ ವಿದ್ಯಾರ್ಥಿಯಾಗಿ ಸೇರಿದರು. ಆಗ ಅಂದಾನಿಯವರಿಗೆ ಎಲ್ಲಿಲ್ಲದ ಉತ್ಸಾಹ ಮತ್ತು ಆನಂದವಾಗಿತ್ತು. 'ವಿಜ್ಞಾನ ಓದುವುದನ್ನು ಬಿಟ್ಟು ಕಲಾ ವ್ಯಾಸಂಗಕ್ಕೆ ಸೇರಿದ ಮೇಲೆ ವೈದ್ಯನನ್ನಾಗಿಸಬೇಕೆಂಬ ಮನೆಯವರ ಆಸೆಗೆ ತಣ್ಣೀರೆರಚಿದಂತಾಗಿತ್ತು. ತೀವ್ರವಾದ ಕಲಾಸಕ್ತಿಯೇ

ಮೇಲುಗೈ ಸಾಧಿಸಿತ್ತು. 'ಹೀಗಾಗಿ ಸಿರಿಂಜ್ ಹಿಡಿದು ಔಷಧಿಗಳೊಂದಿಗೆ ಬೆರೆಯಬೇಕಾಗಿದ್ದ ಅಂದಾನಿಯವರು ಕುಂಚ ಹಿಡಿದು ಬಣ್ಣದಲ್ಲಿ ಬೆರೆತು ಹೋದರು.[೧೯] ಪಿ.ಯು.ಸಿಯಲ್ಲಿ ಶರಣ ಬಸವೇಶ್ವರ ಕಾಲೇಜಿನಲ್ಲಿ ಆರ್ಟ್ಸ್ ವಿಷಯವನ್ನು ಆಯ್ಕೆ ಮಾಡಿಕೊಂಡರು. ತರಗತಿಗಳು ಬೆಳಗ್ಗೆ ಏಳರಿಂದ ಹನ್ನೆರಡು ಘಂಟೆಯವರೆಗೆ ನಡೆಯುತ್ತಿದ್ದವು. ನಂತರ ಮಧ್ಯಾಹ್ನ ಎರಡು ಘಂಟೆಯಿಂದ ಸಾಯಂಕಾಲದವರೆಗೆ ಡಿಪ್ಲಮೋ ಇನ್ ಡ್ರಾಯಿಂಗ್ ಆ್ಯಂಡ್ ಪೇಂಟಿಗ್‌ನಲ್ಲಿ ಕಲಾಶಿಕ್ಷಣವನ್ನು ಶ್ರೀ ಜೆ.ಎಸ್. ಖಂಡೇರಾವ್ ಅವರ ಮಾರ್ಗದರ್ಶನದಲ್ಲಿ ಅಭ್ಯಾಸ ನಡೆಸಿದರು.

ಕಲಾ ಡಿಪ್ಲೊಮಾ ಕಲಿಯುತ್ತಿರುವ ಸಂದರ್ಭದಲ್ಲಿ, ಸಂಯೋಜನೆ ಜಲವರ್ಣ, ಪೋಸ್ಟರ್ ವರ್ಣ, ತೈಲವರ್ಣಗಳನ್ನು ಬಳಸಿಕೊಂಡು ಚಿತ್ರ ರಚಿಸುತ್ತಿದ್ದರು. ಲೈಫ್ ಮತ್ತು ಸ್ಥಿರ ಚಿತ್ರಣ ವಿಷಯವನ್ನು ಎ.ಎಸ್. ಪಾಟೀಲರು ತೆಗೆದುಕೊಳ್ಳುತ್ತಿದ್ದರು. ಕಾಂಪೋಜೆಶನ್ ಲ್ಯಾಂಡ್‌ಸ್ಕೇಪನ್ನು ಜೆ.ಎಸ್. ಖಂಡೇರಾವರು ಹೇಳುತ್ತಿದ್ದರು. ಇವರು ಅದೇ ವರ್ಷವೇ ಬಾಂಬೆಯಿಂದ ಬಂದುದರಿಂದ ಹೆಚ್ಚು ಆಸಕ್ತಿ ಹೊಂದಿದವರಾಗಿದ್ದರು. ಮೊದಲ ಬ್ಯಾಚಿನಲ್ಲಿ ವ್ಹಿ.ಜಿ. ಅಂದಾನಿ, ಶಿವಶರಣ ಉಪ್ಪಿನ, ಬಸವರಾಜ ಉಪ್ಪಿನ, ಮಂಗಳಾ ಪಂಡಿತ, ಹೀಗೆ ಐದಾರು ಜನ ವಿದ್ಯಾರ್ಥಿಗಳಿದ್ದರು. ಇವರಲ್ಲಿ ಒಬ್ಬರಿಗಿಂತ ಒಬ್ಬರು ತಮ್ಮ ಹೊಸತನ, ವಿಚಾರ, ತಂತ್ರ ಮತ್ತು ಶೈಲಿಯಿಂದ ಕಲಾಕೃತಿಯನ್ನು ರಚಿಸುತ್ತಿದ್ದರು. ಇದರಲ್ಲಿ ಅಂದಾನಿಯವರು ಹೊಸ ಹೊಸ ವಿಚಾರಗಳ ಕಲಾಕೃತಿಗಳನ್ನು ವಿನೂತನವಾದ ಪ್ರಯೋಗಗಳನ್ನಾಧರಿಸಿ ಮಾಡುತ್ತಿದ್ದರು. ಆದರೆ ಇವರು ಮಾಡುತ್ತಿದ್ದ ಕಲಾಕೃತಿಗಳನ್ನು ಯಾರೂ ಮೆಚ್ಚುತ್ತಿರಲಿಲ್ಲ. ಯಾಕೆಂದರೆ ಇವರು ನೈಜ ಚಿತ್ರಗಳನ್ನು ಮಾಡುತ್ತಿರಲಿಲ್ಲ. ಅವರ ಕಲಾಕೃತಿಗಳಲ್ಲಿ ಯಾವುದೋ ಒಂದು ರೀತಿಯ ಹೊಸ ವಿಚಾರ ಮತ್ತು ಬಳಸುವ ವರ್ಣದ ರೀತಿ ಸದಾ ಪ್ರಯೋಗಾತ್ಮಕ ದೃಷ್ಟಿಯಿಂದ ಕೂಡಿರುತ್ತಿದ್ದವು. ಆದುದರಿಂದಲೇ ಅಂದಾನಿಯವರು ಸೃಜನಶೀಲತೆಯಲ್ಲಿ ಮುಂಚೂಣಿಯಲ್ಲಿರುತ್ತಿದ್ದರು.

ರಜೆ ಇದ್ದ ಸಂದರ್ಭದಲ್ಲಿ ಕಿರಣಗಿಗೆ ಹೋಗುತ್ತಿದ್ದರು. ಮನೆಗಳ ನೀಲನಕ್ಷೆಯನ್ನು ತಯಾರಿಸಿಕೊಡುತ್ತಿದ್ದರು. ಅದರಿಂದ ಬಂದ ಇನ್ನೂರು ಮುನ್ನೂರು ರೂಪಾಯಿಗಳಿಂದ ತಮಗೆ ಬೇಕಾದ ಬಣ್ಣ, ಕುಂಚ ,ಪುಸ್ತಕಗಳನ್ನು ಕೊಂಡುಕೊಳ್ಳುತ್ತಿದ್ದರು. ಜೊತೆಗೆ ಸಮಯ ಸಿಕ್ಕಾಗ ಬಂದಂತಹ

ದುಡ್ಡಿನಲ್ಲಿ ಗೆಳೆಯರ ಜೊತೆಗೆ ಊಟ ಮಾಡುವುದು, ಸಿನಿಮಾ ನೋಡುವುದು ರೂಡಿಸಿಕೊಂಡಿದ್ದರು. ಮನೆಯ ಕೆಲಸದ ಜೊತೆಗೆ ಗೆಳೆಯರೊಂದಿಗೆ ಆಟೋಟಗಳಲ್ಲಿಯೂ ಪಾಲ್ಗೊಳ್ಳುತ್ತಿದ್ದರು. ತಮ್ಮ ದಿನನಿತ್ಯದ ಖರ್ಚನ್ನು ತಾವೇ ನಿಭಾಯಿಸಿಕೊಳ್ಳುತ್ತಿದ್ದರು. ಮನೆಯ ದುಡ್ಡಿನ ಮೇಲೆ ಹೆಚ್ಚಾಗಿ ಅವಲಂಬಿತರಾಗಿರಲಿಲ್ಲ. ನನ್ನ ಖರ್ಚಿನ ಸಂಪಾದನೆಯನ್ನು ನಾನೇ ಮಾಡಿಕೊಳ್ಳುತ್ತಿದೆ ಎಂದು ಹೇಳುತ್ತಾರೆ.

ಹೊನ್ನಕಿರಣಗಿಗೆ ಹೋದಾಗ "ಮನೆಯಲ್ಲಿ ರಾತ್ರಿಯೆಲ್ಲಾ ಪೇಂಟಿಂಗ್ ಮಾಡುತ್ತಿದ್ದರು. ತಾಯಿ ಸಮಯ ಬಹಳ ಆಗಿದೆ ಮಲಗೋ! ಎಂದು ಯಾವಾಗಲೂ ಬಯ್ಯುತ್ತಿದ್ದರು. ಇಡೀ ರಾತ್ರಿ ಏನು ಮಾಡುತ್ತೀಯೊ? ನೀನು ಮಲಗಲ್ಲ ನಮಗೂ ನಿದ್ದೆ ಮಾಡುವುದಕ್ಕೆ ಬಿಡಲ್ಲ. ಎಂದು ಹೇಳುತ್ತಿದ್ದರು. ಮುಂದೆ ಪೇಂಟಿಂಗ್ ಮಾಡಿದ ಮೇಲೆ ಇವುಗಳನ್ನು ಯಾರಿಗಾದರೂ ತೋರಿಸಬೇಕಲ್ಲಾ, ನಮ್ಮಲ್ಲಿ ಶಿವಾಮನ್ನೊಳ್ಳಿ ಎಂಬ ಕಲಾವಿದರು ಇದ್ದರು. ಆಗಾಗ ನಮ್ಮಲ್ಲಿ ಬರುತ್ತಿದ್ದರು."[20] ಆಗ ಕಲಾಕೃತಿಗಳನ್ನು ಅವರಿಗೆ ತೋರಿಸುತ್ತಿದ್ದೆನು ಎಂದು ಅಂದಾನಿಯವರು ಹೇಳುತ್ತಾರೆ. ಅವರು ಬಹಳಷ್ಟು ಇಷ್ಟಪಡುತ್ತಿದ್ದರು. ಅವರ ಜೊತೆಯಲ್ಲಿ ರೇಖಾಚಿತ್ರಗಳು ಮತ್ತು ಕಲಾವಿದರ ಕಲಾಕೃತಿಗಳು ಮತ್ತು ಕಲೆಯ ಬಗ್ಗೆ ತುಂಬಾ ಹೊತ್ತು ಚರ್ಚೆಮಾಡಿ ಅವರಿಂದ ಬಂದ ಅಭಿಪ್ರಾಯಗಳನ್ನು ಮತ್ತು ಹೊಸ ವಿಚಾರಗಳನ್ನು ತಿಳಿದುಕೊಳ್ಳುತ್ತಿದ್ದರು.

ಅಂದಾನಿಯವರು ತಾವು ಮಾಡಿದಂತಹ ವಸಂತ ಚಿತ್ರಗಳು ಮತ್ತು ಕೆಲವು ರೇಖಾಚಿತ್ರಗಳನ್ನು ಶಿವಾ ಮನ್ನೊಳ್ಳಿ ಅವರಿಗೆ ತೋರಿಸುತ್ತಿದ್ದರು. ಅವರಿಗೆ ಡ್ರಾಯಿಂಗ್ಸ್ ಎಂದರೆ ಬಹಳ ಆಸಕ್ತಿ. ಅವರು ಡ್ರಾಯಿಂಗ್ ಬಹಳ ಚೆನ್ನಾಗಿ ಮಾಡುತ್ತಿದ್ದರು. ಹೀಗಾಗಿ ಅವರ ಡ್ರಾಯಿಂಗ್ಸ್‌ಗಳು ಅಂದಾನಿಯವರಿಗೆ ಬಹಳಷ್ಟು ಪ್ರೇರಣೆ ನೀಡಿದವು. ಶಿವಾಮನ್ನೊಳ್ಳಿಯವರು ಬರೋಡಾ ಸ್ಕೂಲಲ್ಲಿ ಕಲಿತು ಬಂದವರಾಗಿದ್ದರು. ಹೀಗಾಗಿ ಅವರಿಗೆ ಹೆಚ್ಚಿನ ಜ್ಞಾನವಿತ್ತು. ಹೇಳುವಂತ ಜ್ಞಾನ ಕೆಲವರಿಗೆ ಇರುವುದಿಲ್ಲ. ನಮ್ಮಲ್ಲಿ ಬದಲಾವಣೆ ಹೇಗೆ ತರಬೇಕು ಅನ್ನುವುದು ಹೇಳಬೇಕು. ಕೇವಲ ಸರಿಯಾಗಿದೆ ಎಂದರೆ ನಡೆಯುವುದಿಲ್ಲ. ಅದರ ಬಗ್ಗೆ ಚರ್ಚೆ ಮಾಡಿ ನಮ್ಮ ಮನಸ್ಸನ್ನು ಪರಿವರ್ತನೆ ಮಾಡುವ ಗುಣ ಇದೆಯಲ್ಲಾ ಅದು ಬಹಳ ಮಹತ್ವದ್ದಾಗಿರುತ್ತದೆ. ಎಂಬುದಾಗಿ ಅಂದಾನಿಯವರು ತಾವು ಕಂಡುಕೊಂಡ ಅನುಭವದ ಮಾತುಳನ್ನು ವ್ಯಕ್ತಪಡಿಸುತ್ತಾರೆ.

### ಪ್ರಥಮ ಕಲಾ ಪ್ರದರ್ಶನ

ಕಲೆಯಲ್ಲಿ ಹೊಸ ಹೊಸ ಪ್ರಯೋಗ ಮಾಡಬೇಕು. ಅನೇಕ ರೀತಿಯ ಕಲಾ ಚಟುವಟಿಕೆಗಳಲ್ಲಿ ತೊಡಗಿಕೊಳ್ಳವುದಕ್ಕೆ ಅಂದಾನಿಯವರಲ್ಲಿ ಬಹಳ ಆಸಕ್ತಿ ಇತ್ತು. ಬೆಂಗಳೂರಿನಲ್ಲಿ ನಡೆದ ಆರ್.ಎಮ್.ಹಡಪದರ 'We4'(ನಾವು ನಾಲ್ವರು) ಕಲಾಪ್ರದರ್ಶನವನ್ನು ನೋಡಿ ಪ್ರಭಾವಿತರಾದ ಅಂದಾನಿಯವರು ಗುಲಬರ್ಗಾದಲ್ಲಿ ಈಗ ಸೂಪರ್ ಮಾರ್ಕೆಟ್ ಇರುವ ಸ್ಥಳದಲ್ಲಿ ಸಮೂಹ ಕಲಾಪ್ರದರ್ಶನ ಏರ್ಪಡಿಸಿದರು. ಅಲ್ಲಿ ಮೊದಲು ಜೈಲು ಇತ್ತು. ಇದರ ಪಕ್ಕದಲ್ಲೇ ಒಂದು

ಬೂಟ್‌ಹೌಸ್(ಕೆರೋನಾ ಅಂಗಡಿ) ಇತ್ತು. ಆಗ ಅದು ಖಾಲಿ ಇದ್ದುದರಿಂದ ಅಲ್ಲಿ ಗುಂಪು ಪ್ರದರ್ಶನ ಮಾಡಿದ್ದರು. ಅಂದಾನಿಯವರ ತೈಲಚಿತ್ರಗಳು, ಎಂ.ಬಿ. ಲೋಹಾರ್ ಮತ್ತು ಬಸವರಾಜ ಉಪ್ಪಿನನವರ ಜಲವರ್ಣದಿಂದ ರಚಿಸಿದ ಕಲಾಕೃತಿಗಳು ಇದ್ದವು. ಅದೇ ಹುಮ್ಮಸಿನಿಂದ ಕೆಲವು ದಿನಗಳ ನಂತರ ಅದೇ ಕಲಾಪ್ರದರ್ಶನವನ್ನು ಗುಲಬರ್ಗಾದ ಟೌನ್‌ಹಾಲ್‌ನಲ್ಲಿ ಮಾಡಿದ್ದರು. ಅದರ ಉದ್ಘಾಟಕರಾಗಿ ಅಂದಿನ ಪ್ರಸಿದ್ಧ ಬರಹಗಾರರಾಗಿದ್ದ ಅ.ನ.ಕೃಷ್ಣರಾಯರು ಮತ್ತು ಅಂದಾನೆಪ್ಪ ದೊಡ್ಡಮೇಟಿ ಅವರು ಆಗಮಿಸಿದ್ದರು. ಆಗ ಪ್ರದರ್ಶನಕ್ಕೆ ತಂದ ಎಲ್ಲಾ ಕಲಾಕೃತಿಗಳು ನಕಲು ಮಾಡಿದ ಕಲಾಕೃತಿಗಳಾಗಿದ್ದವು. ಮತ್ತು ಕೆಲವರಿಂದ ಪ್ರಭಾವಗೊಂಡು ಮಾಡಿದ ಕಲಾಕೃತಿಗಳಾಗಿದ್ದವು.

ಅಂದಾನಿಯವರು ಡಿಪ್ಲೊಮಾ ಕಲಿಯುತ್ತಿರುವಾಗ ಇವರ ಸ್ನೇಹಿತರಾದ ಪುಲವಾಲಾ, ಚಾಂದ, ದೇವಾನಂದ ಇವರು ತರಗತಿಯಲ್ಲಿ ಹಾಡುವುದು ಮತ್ತು ಹಾಸ್ಯ ಮಾಡಿ ಎಲ್ಲರನ್ನು ತುಂಬಾ ನಗಿಸುತ್ತಿದ್ದರು. ಇವರು ತುಂಬಾ ಕ್ರಿಯಾಶೀಲರಾಗಿದ್ದರು. ಹೀಗಾಗಿ ಸುಮ್ಮನೆ ಇರುತ್ತಿರಲಿಲ್ಲ. ಕಲಾಕೃತಿ ರಚನೆಯಲ್ಲಿ ತೊಡಗಿದರೆ ಹಾಸ್ಯಮಾಡುತ್ತಾ ಕಲಾಕೃತಿಯನ್ನು ರಚಿಸುತ್ತಿದ್ದರು. ಯಾವಾಗಲೂ ಪ್ರಯೋಗಶೀಲರಾಗಿ ಕೆಲಸವನ್ನು ಮಾಡುತ್ತಿದ್ದರು.

ಶ್ರೀಗಿರಿ ಅಂದಾನಿಯವರ ಸಹಪಾಠಿಯಾಗಿದದ್ದರು ಬಿ.ಇ.ಡಿ ಮಾಡುತ್ತಿದ್ದ ಸಂದರ್ಭದಲ್ಲಿ ಗಾಜಿಪೂರದಲ್ಲಿ ಅಂದಾನಿಯವರೊಂದಿಗೆ ಕೊಠಡಿ ಮಾಡಿಕೊಂಡಿದ್ದರು. ಅಂದಾನಿಯವರು ಕೊಠಡಿಯ ತುಂಬಾ ಲ್ಯಾಂಡ್‌ಸ್ಕೇಪ್ ಭಾವಚಿತ್ರಗಳನ್ನು ಅಂಟಿಸುತ್ತಿದ್ದರು. ಇದನ್ನು ಕಂಡು ಶ್ರೀಗಿರಿಯವರು "ಇವೇನು ತರುತೀಯೋ, ಇವು ಎಷ್ಟು ಹಚ್ಚುತೀಯಾ."[೨೧] ಎಂದು ಹೇಳುತ್ತಿದ್ದರು. ಅಂದಾನಿಯವರಿಗೆ ಶ್ರೀಗಿರಿಯವರು ಇಂಗ್ಲೀಷ್‌ನ್ನು ಹೇಳಿಕೊಡುತ್ತಿದ್ದರು. ಒಮ್ಮೆ ಶ್ರೀಗಿರಿಯವರು ಅಂದಾನಿಯವರಿಗೆ ಕೆ.ವಿ.ಅಯ್ಯರ್ ಬರೆದ ಮೈಕಲ್ ಎಂಜಲೋ ರೂಪದರ್ಶಿ ಕಾದಂಬರಿ ಇದರ ಕಥೆ ಪೂರ್ತಿ ತಿಳಿಸಿದರು. ಹೀಗಾಗಿ ಈ ಕಾದಂಬರಿಯನ್ನು ನಾನು ಓದಿದೆ ಎಂದು ಹೇಳುವ ಅಂದಾನಿಯವರು. ಹಾಗೆಯೇ ಪ್ರಥಮವಾಗಿ ಬರವಣಿಗೆಯಲ್ಲಿ ಆಸಕ್ತಿ ಬಂದಿದೆಯೆಂದರೆ ರೂಪದರ್ಶಿ ಕಾದಂಬರಿಯಿಂದಲೇ ಎಂದು ನೆನಪಿಸಿಕೊಳ್ಳುತ್ತಾರೆ.

ಬಾವಿಕಟ್ಟಿ ಅನ್ನುವವರೊಬ್ಬರು ಅಂದಾನಿಯವರಿಗೆ ಸ್ನೇಹಿತರಾಗಿದ್ದರು. ಅವರದು ಒಂದು ಹಳೆಯ ಪುಸ್ತಕದ ಅಂಗಡಿ ಇತ್ತು. ಅಲ್ಲಿ ಅಂದಾನಿಯವರು ಪುಸ್ತಕವನ್ನು ಖರೀದಿ ಮಾಡುತ್ತಿರಲಿಲ್ಲ. ಸುಮ್ಮನೆ ಹೋಗಿ ಅಲ್ಲಿರುವ ಪುಸ್ತಕವನ್ನು ಓದುತ್ತಿದ್ದರು. ಧರ್ಮಯುಗ ಪತ್ರಿಕೆಯಲ್ಲಿ ಪ್ರಸಿದ್ಧ ಕಲಾವಿದರ ಕಲಾಕೃತಿಗಳ ಛಾಯಾಚಿತ್ರಗಳು ಬರುತ್ತಿದ್ದವು, ಅವುಗಳನ್ನು ಕತ್ತರಿಸಿ ಸಂಗ್ರಹಿಸುತ್ತಿದ್ದರು. ಬಸವರಾಜ ಕಟ್ಟೀಮನಿ, ಅ.ನ.ಕೃ ಮುಂತಾದವರೆಲ್ಲರ ಪುಸ್ತಕಗಳನ್ನು ಬಹಳ ಓದುತ್ತಿದ್ದರು.

ರೂಪದರ್ಶಿ ಕಾದಂಬರಿ ಓದಿದ ಮೇಲೆ ಪುಸ್ತಕ ಓದುವ ಹುಚ್ಚು ಹೆಚ್ಚಾಯಿತು. ಚಿಕ್ಕ ಕಥೆಗಳನ್ನು ಓದುವುದು, ಮನೆಯಲ್ಲಿ ಬರುತ್ತಿದ್ದ ಕಸ್ತೂರಿ ಪತ್ರಿಕೆಗಳನ್ನು ಓದುವುದು. ಹೀಗೆ ಅಂದಾನಿಯವರು

ಬರವಣಿಗೆಯಲ್ಲಿ ಆಸಕ್ತಿ ಹೆಚ್ಚಾಗಲು ಕಾರಣವಾಯಿತು. ಬಿಡುವಿನ ವೇಳೆಯಲ್ಲಿ ಬರವಣಿಗೆಯನ್ನು ಮಾಡುತ್ತಿದ್ದರು. ಅಂದಾನಿಯವರ ನಡವಳಿಕೆ ವಿಶಿಷ್ಟವಾಗಿತ್ತು. ಉಳಿದವರಿಗೆ ಅರ್ಥವಾಗುತ್ತಿರಲಿಲ್ಲ. ಹೀಗಾಗಿ ಅವರು ಯಾವಾಗಲೂ ಪ್ರಯೋಗಶೀಲರಾಗಿದ್ದರು. ಪತ್ರಿಕೆಯಲ್ಲಿಬಂದಿರುವಂತಹ ಕಲೆಯ ಲೇಖನಗಳು ಮತ್ತು ಕಲಾವಿದರ ಕಲಾಕೃತಿಗಳನ್ನು ಬಹಳಷ್ಟು ಸಂಗ್ರಹ ಮಾಡುತ್ತಿದ್ದರು ಅದೊಂದು ಹವ್ಯಾಸವೇ ಆಗಿತ್ತು. ಹೀಗಾಗಿ ಅಂದಾನಿಯವರ ಗೆಳೆಯರಲ್ಲಿ ಯಾರಿಗೂ ಈ ರೀತಿಯಾದಂತಹ ಹವ್ಯಾಸ ಇರುತ್ತಿರಲಿಲ್ಲ. ಅವರ ಗೆಳೆಯರು ಇವರಿಗೆ "ಏನೋ ನಿನಗೆ ಇಂಗ್ಲೀಷೇ ಬರುವುದಿಲ್ಲ. ಪೇಪರ್ ಯಾಕೆ ಖರೀದಿ ಮಾಡುತ್ತೀಯಾ?"[೨೨] ಎಂದು ಕೇಳುತ್ತಿದ್ದರು. ಇದಕ್ಕೆ ಪ್ರತಿಯುತ್ತರವಾಗಿ ಇಂಗ್ಲೀಷ್ ಭಾಷೆ ಮಹತ್ವ ಅಲ್ಲ, ಕಲೆ ಅನ್ನುವುದು ಒಂದು ಭಾಷೆ ಅದು ವಿಶ್ವವ್ಯಾಪಿ ಅದು ಅಮೇರಿಕಾದ್ದಾದರೇನು? ಜಪಾನದ್ದಾದರೇನು? ಅದೊಂದು ದೃಶ್ಯ ಭಾಷೆ. ಇದು ಎಲ್ಲರಿಗೂ ಅರ್ಥವಾಗುವಂತಹ ಭಾಷೆ ಎಂದು ಹೇಳುತ್ತಿದ್ದರು.

### ಡಿಪ್ಲೊಮಾ ಪರಿಕ್ಷೆ

ಕರ್ನಾಟಕದಲ್ಲಿ ಕೆಲವೇ-ಕೆಲವು ಕಲಾಶಾಲೆಗಳಿದ್ದುದ್ದರಿಂದ ಧಾರವಾಡ ಪರೀಕ್ಷಾ ಕೇಂದ್ರವಾಗಿತ್ತು. ಅಲ್ಲಿಗೆ ಬೆಂಗಳೂರು, ಮಂಗಳೂರು, ಉಡುಪಿ, ಗುಲಬರ್ಗಾ, ಹುಬ್ಬಳ್ಳಿ ಹೀಗೆ ಕರ್ನಾಟಕದ ಎಲ್ಲಾ ಭಾಗಗಳಿಂದಲೂ ಅಭ್ಯರ್ಥಿಗಳು ಬಂದು ಪರೀಕ್ಷೆಗೆ ಹಾಜರಾಗುತ್ತಿದ್ದರು. ಅಲ್ಲಿ ಕಲಾಪರೀಕ್ಷೆಗಳು ಹದಿನೈದು ದಿನಗಳು ನಡೆಯುತ್ತಿದ್ದವು. ಸಂಯೋಜನಾ ಮೇಜರ್ ವಿಷಯವಾದುದರಿಂದ ಮೊದಲು ಸಂಯೋಜನಾ ಚಿತ್ರವನ್ನು ಜಲವರ್ಣದಲ್ಲಿ ಫುಲ್ ಇಂಪಿರಿಯಲ್ ಅಳತೆಯಲ್ಲಿ ರಚಿಸಿದರು. ನಂತರ ೩x೪ ಅಳತೆಯಲ್ಲಿ ತೈಲವರ್ಣದಿಂದ ರಚಿಸುತ್ತಿದ್ದರು. ಪರೀಕ್ಷೆಯಲ್ಲಿ ಅವರದೇ ಕಲಾಶೈಲಿ ಬೇಕಾಗುತ್ತಿತ್ತು. ಎಲ್ಲಾ ವಿದ್ಯಾರ್ಥಿಗಳ ಕಲಾಕೃತಿಗಳು ಒಂದೇ ತರಹ ಹೋಲುವಂತೆ ಇದ್ದರೆ ಅವುಗಳಿಗೆ ಹೆಚ್ಚು ಅಂಕಗಳು ಬರುತ್ತಾ ಇರಲಿಲ್ಲ. ಹೀಗಾಗಿ ತಮ್ಮದೇ ಆದಂತಹ ಶೈಲಿಯನ್ನು ರೂಡಿಸಿಕೊಳ್ಳಬೇಕಾಗಿತ್ತು. ಪ್ರಾರಂಭದಲ್ಲಿ ಅಂದಾನಿಯವರು ಆಲಮೇಲಕರರ ಕಲಾಶೈಲಿಯ ಕಲಾಕೃತಿಗಳನ್ನು ಮಾಡುತ್ತಿದ್ದರು. ಆಧುನಿಕತೆ ಬಂದ ಮೇಲೆ ಬದಲಾವಣೆಯನ್ನು ಮಾಡಿಕೊಂಡು, ತಮ್ಮದೆಯಾದಂತ ಶೈಲಿಯನ್ನು ರೂಢಿಸಿಕೊಂಡರು.

ಪರೀಕ್ಷೆಯ ಸಂದರ್ಭದಲ್ಲಿ ಧಾರವಾಡಕ್ಕೆ ಹೋದಾಗ ಆಗ ಎಷ್ಟು ಪುಸ್ತಕಗಳನ್ನು ಕೊಂಡುಕೊಂಡಿದ್ದರೆಂದರೆ ಪ್ರತಿಯೊಂದು ಪುಸ್ತಕ ಅಂಗಡಿಗೆ ಹೋಗಿ ನಿಮ್ಮಲ್ಲಿ ಕಲಾಪುಸ್ತಕ ಇದೆಯೇನು ಅಂತ ಕೇಳುತ್ತಿದ್ದರು. ಅಂಗಡಿಯವರು ಇದಾವೇ ನೋಡಿ ಸಾರ್, ಸುಮಾರು ಇಪ್ಪತ್ತು ವರ್ಷಗಳಿಂದ ಯಾರೂ ಕೊಂಡಿಲ್ಲ ಎಂದರು. ಪುಸ್ತಕ ಎಷ್ಟಮಟ್ಟಿಗೆ ಖರೀದಿಸಿಕೊಂಡದ್ದರೆಂದರೆ ಊರಿಗೆ ಹೋಗುವದಕ್ಕೆ ಅವರ ಹತ್ತಿರ ದುಡ್ಡೇ ಖಾಲಿಯಾಗಿದ್ದವು. ಖಾನಾವಳಿಗೆ ಹೋಗಿ ಉದ್ರಿ ಊಟ ಮಾಡಿದರು. "ಅಂಗಡಿಯವರಿಗೆ ನಮ್ಮಲ್ಲಿ ಹಣ ಖಾಲಿ ಆಗಿದೆ ಊರಿಂದ ಮನಿಯಾರ್ಡರ ಮೂಲಕ ಹಣ ಕಳಿಸಿದ ಕೂಡಲೇ ತಂದು ಕೊಡುತ್ತೆವೆಂದು ಅವರಲ್ಲಿ ಮನವಿ ಮಾಡಿಕೊಂಡು ಊಟ ಮಾಡಿದರು

ಪುಸ್ತಕ ಕೊಂಡುಕೊಳುವುದು ಅಂದರೆ ತುಂಬ ಆಸಕ್ತಿ ಇತ್ತು. ಗುಲಬರ್ಗಾಕ್ಕೆ ಮರಳಿ ಹೋಗುವದಕ್ಕೆ ಹಣಬೇಕೆಲ್ಲ ಎಂದು ಸಹ ವಿಚಾರಮಾಡುತ್ತಿರಲಿಲ್ಲ. ವೊದಲು ಕಲಾ ಪುಸ್ತಕಗಳನ್ನು ಕೊಂಡುಕೊಳ್ಳುತ್ತಿದ್ದರು. ಈ ರೀತಿಯಾದಂತ ಪುಸ್ತಕದ ಪ್ರೇಮ ಹೋಂದಿದ್ದವರಾಗಿದರು.'[೨೩]

ಅಂದಾನಿಯವರು ಪರೀಕ್ಷೆಯಲ್ಲಿ ಸಂಯೋಜನೆಯ ಕಲಾಕೃತಿಗಳನ್ನು ರಚಿಸುವಾಗ ತಮ್ಮದೇ ಆದ ಹೊಸ ಹೊಸ ವಿಚಾರ ಮತ್ತು ತಂತ್ರಗಳನ್ನು ಬಳಸಿಕೊಂಡು ನೈಪುಣ್ಯತೆಯಿಂದ ಕಲಾಕೃತಿಯನ್ನು ಪೂರ್ಣಗೊಳಿಸಿ ಆ ಕಲಾಕೃತಿಗೆ ಜೀವಂತಿಕೆಯನ್ನು ತಂದುಕೊಡುತ್ತಿದ್ದರು. ಅಂತಹ ಗಂಭೀರ ಅಧ್ಯಯನ ಕೈಗೊಂಡ ಅಂದಾನಿಯವರಿಗೆ ೧೯೬೯ರಲ್ಲಿ ಡಿಪ್ಲೊಮಾ ಅಂತಿಮ ವರ್ಷದ ಪರೀಕ್ಷೆಯಲ್ಲಿ ನೀರೀಕ್ಷೆಗಿಂತ ಹೆಚ್ಚಿನ ಅಂಕಗಳು ಬಂದು ಕರ್ನಾಟಕ ರಾಜ್ಯಕ್ಕೆ ಪ್ರಥಮ ರ್‍ಯಾಂಕ್ ಪಡೆದರು. ನಂತರ ೧೯೭೨ರಲ್ಲಿ ಬಿ.ಎ ಪದವಿಯನ್ನು ಶರಣ ಬಸವೇಶ್ವರ ಕಾಲೇಜನಲ್ಲಿ ಪಡೆದರು.

ರಾಜಸ್ಥಾನದ ಬನಸ್ಥಳಿಯ ವಿದ್ಯಾಪೀಠಕ್ಕೆ ಭಿತ್ತಿಚಿತ್ರ ರಚನೆಯ ತರಬೇತಿ ಮತ್ತು ವ್ಯಾಸಂಗಕ್ಕಾಗಿ ಕರ್ನಾಟಕ ಸರಕಾರವು ಐದು ಜನ ಕಲಾವಿದರನ್ನು ಪ್ರತಿ ವರ್ಷ ಕಳುಹಿಸುತ್ತಿತ್ತು. ೧೯೭೦ರಲ್ಲಿ ಅಂದಾನಿಯವರ ಜೊತೆಗೆ ಆರ್.ಎಮ್.ಹಡಪದ, ಕಾಳಿದಾಸ ಪತ್ತಾರ, ಸ್ವಾಮಿ, ಎಸ್.ಎಸ್ ಕುಕ್ಕೆಯವರು ಆಯ್ಕೆಯಾದರು. ಅಂದಾನಿಯವರು ಬನಸ್ಥಳೀಯ ವಾತಾವರಣದಲ್ಲಿ ಮೂರು ತಿಂಗಳು ದೇವಕಿನಂದ ಶರ್ಮಾ ಅವರಲ್ಲಿ ಭಿತ್ತಿಚಿತ್ರ ರಚನಾ ತರಬೇತಿ ಪಡೆಯುತ್ತಾರೆ. ಅಲ್ಲಿಯ ವಾತವರಣದಲ್ಲಿ ಕಲ್ಕತ್ತಾ, ದೆಹಲಿ, ಗುಜರಾತ ಅನೇಕ ಕಲಾವಿದರ ಸಂಪರ್ಕವಾಗುತ್ತದೆ. ಇಲ್ಲಿ ಬಂದಂತಹ ಕಲಾವಿದರು ಅಂದಾನಿಯವರಿಗೆ ಪರಿಚಯವಾಗಿ ಗೆಳೆಯರಾಗುತ್ತಾರೆ. ಮುಂದೆ ಸ್ಕೂಲ್ ಆಫ್ ಆರ್ಟ್ ಪ್ರಗತಿ ಮಾಡಲು ಇವರಿಂದ ಸಹಾಯ ಸಿಗುತ್ತದೆ.

ಅಂದಾನಿಯವರಿಗೆ ರೇಖಾಚಿತ್ರ ಮಾಡಲು ಹೆಚ್ಚಿನ ಆಸಕ್ತಿಗೆ ಕಾರಣವೇನೆಂದರೆ ಭಿತ್ತಿಚಿತ್ರ ರಚನೆಯ ತರಬೇತಿಗೆ ರಾಜಸ್ಥಾನದ ಬನಸ್ಥಳಿ ವಿದ್ಯಾಪೀಠದಲ್ಲಿ ವಿವಿಧ ರಾಜ್ಯಗಳಿಂದ ಬಂದಿರುವ ಕಲಾವಿದರು ಇವರ ರೇಖಾಚಿತ್ರ ಮಾಡುವುದಕ್ಕೆ ಜೈಪೂರದಲ್ಲಿರುವ ಮನೆಗಳು, ಕುದುರೆ, ಓಂಟೆ, ಗಾಡಿ, ಮತ್ತು ಜನರ ಉಡುಗೆ ತೊಡುಗೆಗಳುನ್ನು ಹುಡುಕಿಕೊಂಡು ಹೋಗುತ್ತಿದ್ದರು. ಅವರು ಮಾಡುತ್ತಿದ್ದ ರೇಖಾಚಿತ್ರಗಳಿಂದ ಅಂದಾನಿಯವರು ಪ್ರೇರಣೆಗೊಳ್ಳುತ್ತಾರೆ. ಆದರಿಂದ ರೇಖಾಚಿತ್ರ ಎಂಬುದು ಇವರ ಕಲಾಬದುಕಿನಲ್ಲಿ ಬಹಳ ಮಹತ್ವ ಪಡೆದುಕೊಳ್ಳುತ್ತದೆ.

ಅಲ್ಲಿ ಬಂದಂತಹ ಕಲಾವಿದರು ಅಂದಾನಿಯವರ ರೇಖಾಚಿತ್ರಗಳನ್ನು ನೋಡಿ ಕಪ್ಪು ಬಿಳುಪಿನ ಚಿತ್ರಗಳ ಬಗ್ಗೆ ಬಹಳಷ್ಟು ಮಾಹಿತಿಕೊಡುತ್ತಿದ್ದರು. ಅಂದಾನಿಯವರು ಹೀಗೆ ಹೇಳುತ್ತಾರೆ ಈ ರೇಖಾಚಿತ್ರ, ಚಿತ್ರಕಲೆಯಲ್ಲಿ ಭದ್ರ ಅಡಿಪಾಯ ಒದಗಿಸುತ್ತದೆ. ಚಿತ್ರರಚನೆಯಲ್ಲಿ ಮುಂದೆ ಆತ್ಮಸ್ಥೈರ್ಯ ನೀಡುತ್ತದೆ. ಕಲಾಕೃತಿ ರಚನೆಯಲ್ಲಿ ಆತ್ಮಸ್ಥೈರ್ಯ ನಿರ್ಮಾಣವಾಯಿತೆಂದರೆ ಕಲಾಕೃತಿಯನ್ನು ಯಾವ

ರೀತಿಯಲ್ಲೂ ಮಾಡಬಹುದು. ಕಪ್ಪು ಬಿಳುಪಿನ ರೇಖಾಚಿತ್ರಗಳು ಮನುಷ್ಯನಿಗೆ ಒಂದು ಗಡಸುತನ ನಿರ್ಮಾಣ ಮಾಡುತ್ತದೆ. ಕಲಾವಿದರಿಗೆ ಅದು ತಳಪಾಯ ಈ ದೃಷ್ಠಿಯಿಂದ ರೇಖಾಚಿತ್ರಗಳನ್ನು ಕಲಾವಿದರು ಹೆಚ್ಚಾಗಿ ಚಿತ್ರಿಸಬೇಕೆಂದು ಅಂದಾನಿಯವರು ಅಭಿಪ್ರಾಯಪಡುತ್ತಾರೆ.

**ಟಿಪ್ಪಣಿ**

೪.

ಅಧ್ಯಯನ, ಪುಟ.೧೫

೫. ಅದೇ ಪುಸ್ತಕ, ಪುಟ.೧೭

೬. ಚಂದ್ರಹಾಸ.ವಾಯ. ಜಾಲಿಹಾಳ(ಸಂ), :ಅಂದಾನಿ ಐವತ್ತು, ಪುಟ.೭೬

೭. ಅದೇ ಪುಸ್ತಕ, ಪುಟ.೭೭

೮. ಅದೇ ಪುಸ್ತಕ, ಪಟ.೭೭

೯. ಅದೇ ಪುಸ್ತಕ, ಪುಟ.೨

೧೦. ಡಾ,ಶಿವಾನಂದ ಎಚ್ ಬಂಟನೂರ :ವ್ಹಿ.ಜಿ ಅಂದಾನಿ, ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು, ಪುಟ.೧೧

೧೧. ವ್ಹಿ.ಜಿ ಅಂದಾನಿಯವರ ಜೊತೆ ಸಂದರ್ಶನ, ದಿನಾಂಕ ೨೨.೦೩.೨೦೧೪

೧೨. ರಂಗಸ್ವಾಮಿ.ಆರ್ :ಚಿತ್ರಕಲಾವಿದ ರುಮಾಲಯ್ಯಾ ಚನ್ನಬಸವಯ್ಯನವರ ಬದುಕು ಮತ್ತು ಕಲಾಕೃತಿಗಳು, ಪು.೨೦

೧೩. ವ್ವಿಜಿ ಅಂದಾನಿಯವರ ಜೊತೆ ಸಂದರ್ಶನ, ದಿನಾಂಕ ೧೯.೦೧.೨೦೧೪

೧೪. ವ್ವಿಜಿ ಅಂದಾನಿಯವರ ಜೊತೆ ಸಂದರ್ಶನ, ದಿನಾಂಕ ೨೨.೦೩.೨೦೧೪

೧೫. ಗುಲಬರ್ಗಾ ಜಿಲ್ಲೆ ಗ್ಯಾಸೆತಿಯರ್, ಪುಟ ೨೪೫

೧೬. ವ್ವಿಜಿ ಅಂದಾನಿಯವರ ಜೊತೆ ಸಂದರ್ಶನ, ೧೯.೦೧.೨೦೧೪

೧೭. ವ್ವಿಜಿ ಅಂದಾನಿಯವರ ಜೊತೆ ಸಂದರ್ಶನ, ೨೨.೦೩.೨೦೧೪

೧೮. ಬಸವರಾಜ ಉಪ್ಪಿನವರ ಜೊತೆ ಸಂದರ್ಶನ, ೨೩.೦೪.೨೦೧೪

೧೯. ಡಾ. ಶಿವಾನಂದ ಎಚ್ ಬಂಟನೂರ :ವ್ಹಿ.ಜಿ ಅಂದಾನಿ, ಪುಟ.೧೨

೨೦. ವ್ವಿಜಿ ಅಂದಾನಿಯವರ ಜೊತೆ ಸಂದರ್ಶನ, ೨೨.೦೩.೨೦೧೪

೨೧. ವ್ವಿಜಿ. ಅಂದಾನಿಯವರ ಜೊತೆ ಸಂದರ್ಶನ, ೧೯.೦೧.೨೦೧೪

೨೨. ವ್ವಿಜಿ. ಅಂದಾನಿಯವರ ಜೊತೆ ಸಂದರ್ಶನ, ೧೯.೦೧.೨೦೧೪

೨೩. ಬಸವರಾಜ ಉಪ್ಪಿನನವರ ಜೊತೆ ಸಂದರ್ಶನ, ೨೩.೦೪.೨೦೧೪



# ಅಧ್ಯಾಯ – ೩

## ಕಲಾ ಬದುಕು ಐಡಿಯಲ್ ಫೈನ್ ಆರ್ಟ್ ಸಂಸ್ಥೆ

೩.೧. ಗ್ರಿನೊಬಲ್ಸ ಪ್ರಿಂಟಿಂಗ್ ಪ್ರೆಸ್

೩.೨. ಐಡಿಯಲ್ ಫೈನ್ ಆರ್ಟ್ ಸಂಸ್ಥೆ ಹುಟ್ಟು ಮತ್ತು ಬೆಳವಣಿಗೆ

೩.೩. ಲೈಫ್ ಮ್ಯಾಗಜಿನ್ ಸಂಗ್ರಹ

೩.೪. ಡಿ.ಟಿ.ಸಿ ಮತ್ತು ಡಿ.ಎಂ.ಸಿ

೩.೫. ಭೋಧನಾ ವಿಧಾನ

೩.೬. ಅಂದಾನಿಯವರ ಚಿತ್ರ ರಚಣೆಗೆ ಆಕರ್ಷಣೆ

## ಅಧ್ಯಾಯ-೩

# ಕಲಾಬದುಕು ಮತ್ತು ಐಡಿಯಲ್ ಫೈನ್ ಆರ್ಟ್ ಸಂಸ್ಥೆ

ಎಲ್ಲಾ ಕ್ಷೇತ್ರಗಳಲ್ಲೂ ವೃತ್ತಿ ಬದುಕು ಮಹತ್ವದ ಸ್ಥಾನವನ್ನು ಪಡೆದಿರುತ್ತದೆ. ಒಬ್ಬೊಬ್ಬ ವ್ಯಕ್ತಿಯ ಜೀವನ ವೈರುಧ್ಯತೆಯಿಂದ ಕೂಡಿರುತ್ತದೆ. ವೃತ್ತಿ ಎಂಬುದು ಒಂದು ಸಾಧನವಾಗಿದೆ. ಆ ಮೂಲಕ ಸಾಮಾಜಿಕ ವ್ಯವಸ್ಥೆಯಲ್ಲಿ ಸ್ಥಾನಮಾನಗಳು ಲಭಿಸುತ್ತವೆ. ಜೊತೆಗೆ ಆರ್ಥಿಕ ಸ್ಥಿತಿಯೂ ಕೂಡಾ ಸ್ಥಿರವಾಗಿರದೆ ಕೆಲವು ಸಲ ಒಂದು ರೂಪಾಯಿಗೂ ಬಾಯಿ ತೆರೆಯುವ ಪ್ರಸಂಗಗಳು ಬರುವುದುಂಟು. ವೃತ್ತಿಜಿವನದಲ್ಲಿ ಪ್ರಗತಿದಾಯಕವಾಗಿದ್ದರೆ ಸುಗಮ ಜೀವನ ಸಾಗುತ್ತದೆ. ಇಲ್ಲದಿದ್ದರೆ ಕಷ್ಟ. ಆದರೂ ಸಹ ಅಂದಾನಿಯವರು ಎಂತಹ ಸಂದರ್ಭ ಬಂದರೂ, ಆರ್ಥಿಕವಾಗಿ ತೊಂದರೆಗಳಾದರೂ ಸಹ ಎದೆಗುಂದದೆ ಚಿತ್ರಕಲೆಯೇ ನನ್ನ ಆರಾಧ್ಯ ದೈವ ಮತ್ತು ಜೀವನ ಎಂಬ ದೃಢವಾದ ನಿಲುವಿಗೆ ಬದ್ಧರಾಗಿ ವೃತ್ತಿ ಜೀವನಕ್ಕೆ ಎಂದೂ ಎರಡು ಬಗೆಯದೆ, ನಿರಂತರ ಪ್ರಯತ್ನದ ಫಲವಾಗಿ ಇಂದು ಅವರ ಕಾರ್ಯ ಸಾಧನೆ ರಾಜ್ಯ, ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಬೆಳಗುತ್ತಿರುವುದು ಶ್ಲಾಘನೀಯ. ಬೆಂಗಳೂರು, ಬಾಂಬೆ, ಕಲ್ಕತ್ತಗಳಲ್ಲಿದ್ದಂತ ಚಿತ್ರಕಲಾ ಶಾಲೆಯನ್ನು ಗುಲಬರ್ಗಾದಲ್ಲಿ ಸ್ಥಾಪಿಸಿ ಯಶಸ್ಸಿನ ಪಯಣವನ್ನು ಸಾಗಿಸುತ್ತಿರುವ ಅಂದಾನಿಯವರು ನಿಜಕ್ಕೂ ಪ್ರಯತ್ನ ಶೀಲರಾಗಿದ್ದಾರೆ. ಹಾಗಾಗಿ ಅವರು ವೃತ್ತಿ ಜೀವನವನ್ನು ಹೆಚ್ಚು ಗೌರವಿಸುವ ವ್ಯಕ್ತಿಗಳಲ್ಲಿ ಒಬ್ಬರಾಗಿದ್ದಾರೆ.

### ೩.೧. ಗ್ರಿನೋಬಲ್ಸ್ ಪ್ರಿಂಟಿಂಗ ಪ್ರೆಸ್

ರಾಜೇಂದ್ರ ಪಾಟೀಲ, ಭೀಮನಳ್ಳಿ ಮುಂತಾದ ಹಿರಿಯ ಗೆಳೆಯರು ಸ್ಥಾಪಿಸಿದ ಗ್ರಿನೋಬಲ್ಸ್ ಪ್ರಿಂಟಿಂಗ್ ಪ್ರೆಸ್‌ನಲ್ಲಿ ೧೯೭೦ರಲ್ಲಿ ಅಂದಾನಿಯವರು ಕೆಲಸಕ್ಕೆ ಸೇರಿಕೊಂಡರು. ಸಾಕಷ್ಟು ಕಲಾ ಕೆಲಸವನ್ನು ಇಲ್ಲಿ ಮಾಡಿದರು. ಜೊತೆಗೆ ಅವರ ವೈಯಕ್ತಿಕ ಅಭಿವೃದ್ದಿಗೆ ಸಹಾಯ ಮಾಡುವ ಸೃಜನಾತ್ಮಕ ಕಲೆಗೂ ಲಕ್ಷಕೊಟ್ಟರು. ಇದು ಅವರ ಪ್ರತಿಭೆ ಅರಳಲು ಸಹಾಯಕವಾಯಿತು.

ಪ್ರಿಂಟಿಂಗ್ ಪ್ರೆಸ್‌ನಲ್ಲಿ ಕೆಲಸ ಮಾಡುತ್ತಲೇ ಅಂದಾನಿಯವರು ಮೆಡಿಕಲ್ ಕಾಲೇಜು. ಇಂಜಿನಿಯರಿಂಗ್ ಕಾಲೇಜು, ಪುಸ್ತಕಗಳಿಗೆ ಹೀಗೆ ಅನೇಕ ಮ್ಯಾಗ್‌ಝಿನ್ ಮುಖಪುಟಗಳನ್ನು ಮಾಡಿಕೊಟ್ಟಿದ್ದರು. ಅವರು ಇದಕ್ಕೆ ಬಹಳ ಮೆಚ್ಚುಗೆ ವ್ಯಕ್ತಪಡಿಸುತ್ತಿದ್ದರು. ಅವರು ಯಾವುದೇ ಕೆಲಸ ಮಾಡಬೇಕಾದರೆ ಯಥಾವತ್ತಾಗಿ ಮಾಡುತ್ತಿರಲಿಲ್ಲ. ಸೃಜನಾತ್ಮಕ ದೃಷ್ಟಿಯಿಂದ ಅವರದೇ ಶೈಲಿಯನ್ನು ಬಳಸಿಕೊಂಡು

ಮಾಡುತ್ತಿದ್ದರು. ಹೀಗಾಗಿ ಅಂದಾನಿಯವರು ಪ್ರತಿಯೊಬ್ಬ ವಿದ್ಯಾರ್ಥಿಯಲ್ಲಿ ಸೃಜನಾತ್ಮಕ ದೃಷ್ಟಿಯನ್ನು ಬೆಳೆಸಿದ್ದಾರೆ. ಅಂದಾನಿಯವರು ಪ್ರಿಂಟಿಂಗ್ ಪ್ರೆಸ್‌ನಲ್ಲಿ ತುಂಬಾ ಆಸಕ್ತಿ ಹೊಂದಿದವರಾಗಿದ್ದರು. ಪ್ರಿಂಟಿಂಗ್ ಪ್ರೆಸ್‌ನಿಂದಲೇ ಬಹಳಷ್ಟು ವಿಷಯಗಳನ್ನು ಕಲಿತುಕೊಂಡು ವೈಭವ ಸರಣಿಯ ಕಲಾಕೃತಿಗಳನ್ನು ಮಾಡಿದ್ದಾರೆ. ಅನೇಕ ವಿದ್ಯಾರ್ಥಿಗಳಿಗೂ ಅವರು ಪ್ರಭಾವಿತರಾಗಿದ್ದಾರೆ.

### ೧.೨. ಐಡಿಯಲ್ ಫೈನ್ ಆರ್ಟ್ ಸಂಸ್ಥೆ ಹುಟ್ಟು ಮತ್ತು ಬೆಳವಣಿಗೆ

ಜೆ.ಎಸ್ ಖಂಡೇರಾವರು ಪ್ರಾರಂಭದಲ್ಲಿ ತಮ್ಮ ಮನೆಯಲ್ಲಿ ನಾಲ್ಕಾರು ವಿದ್ಯಾರ್ಥಿಗಳಿಗೆ ಕಲಾ ಶಿಕ್ಷಣ ಹೇಳಿಕೊಡಲು ಮುಂದಾಗುತ್ತಾರೆ. "ಕೆಲತಿಂಗಳ ನಂತರ ಅದಕ್ಕೆ ನಿರ್ದಿಷ್ಟ ಚೌಕಟ್ಟು ನೀಡಲು ೧೯೭೫ರಲ್ಲಿ ಈಗಿನ ಕಿರಣಾ ಬಜಾರನಲ್ಲಿ ಕೋಣೆಯೊಂದನ್ನು ಬಾಡಿಗೆಗೆ ಪಡೆದು **'ಆದರ್ಶ ಕಲಾಶಾಲೆ'**ಯನ್ನು (ದಿ ಐಡಿಯಲ್ ಫೈನ್ ಆರ್ಟ್ ಸಂಸ್ಥೆ) ಹುಟ್ಟುಹಾಕುತ್ತಾರೆ."[೨೪] ಗುಲಬರ್ಗಾದಲ್ಲಿ ಚಿತ್ರಕಲೆಯಂದರೆ ಯಾರಿಗೂ ಗೊತ್ತಿರಲ್ಲಿ. ಆದರಿಂದ ಅವರು ಚಿತ್ರಕಲೆಗೆ ಅಷ್ಟೋಂದು ಪ್ರೊತ್ಸಾಹ ಕೊಡುತ್ತರಲಿಲ್ಲ. ಖಂಡೇರಾವರು ಕಲಾ ಶಾಲೆಯನನು ನಡೆಸಲು ತುಂಬಾ ಪರಿಶ್ರಮ ಪಡಬೇಕಾಯಿತ್ತು. ಅವರಿಗೆ ಕಲಾಶಾಲೆನ್ನು ಮುನ್ನಡೆಸುವಲ್ಲಿ ಕಷ್ಟಗಳು ಒಂದರಂತೆ ಒಂದು ಹೆಚ್ಚಿತೋಡಗಿದವು. ವಿದ್ಯಾರ್ಥಿಗಳು ಕೂಡುವ ಪೀಸು ಶಾಲೆ ನಡೆಸುವ ಕೋಣೆಯ ಬಾಡಿಗೆಗೆ ಸಾಕಾಗುತ್ತಿರಲಿಲ್ಲ ಮನೆಯಿಂದ ತಂದು ಮತ್ತುಬ್ಬರ ಕಡೆಯಿಂದ ಸಾಲ ಸೋಲ ಮಾಡಿಕೊಂಡು ಕಲಾ ಶಾಲೆಯನ್ನು ನಡೆಸುತ್ತಿದ್ದರು. ಇದೆ ಸಮಯದಲ್ಲಿ ಎ.ಎಸ್ ಪಾಟೀಲರು ಖಂಡೇರಾವರ ಜೊತೆಗೂಡಿ ವಿದ್ಯಾರ್ಥಿಗಳಿಗೆ ಕಲಾಶಿಕ್ಷಣದ ಜೊತೆಗೆ ಕಲೆಯ ಮೌಲ್ಯಗಳನ್ನು ಬೋಧಿಸುವುದರೊಂದಿಗೆ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರ ಮೂಲಕ ವಿದ್ಯಾರ್ಥಿಗಳ ಸರ್ವಾಂಗೀಣ ಬೆಳವಣಿಗೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು.

ಎ.ಎಸ್.ಪಾಟೀಲರು ಬಂದ ನಂತರ ಕಲಾಶಾಲೆಯು ಚೇತರಿಕೆಯನ್ನು ಕಂಡುಕೊಂಡಿತ್ತೆನ್ನುವಾಗಲೇ ಅವರು ಹೈದ್ರಾಬಾದ ಕರ್ನಾಟಕ ಶಿಕ್ಷಣ ಸಂಸ್ಥೆಯ ಮಹಾದೇವಪ್ಪ ರಾಂಪುರೆ ವೈದ್ಯಕೀಯ ಮಹಾವಿದ್ಯಾಲಯ ಕಲಾವಿದರ ಉದ್ದೆಗೆ ನೇಮಕಗುಂಡರು. ಹಿಗಾಗಿ ಅನಿವಾರ್ಯವಾಗಿ ಆದರ್ಶ ಕಲಾಶಾಲೆಯನ್ನು ಬಿಟ್ಟು ಹೋಗುತ್ತಾರೆ. "ಇದರೊಂದಿಗೆ ಆದರ್ಶ ಕಲಾಶಾಲೆಯನ್ನು ಮುನ್ನೆಡೆಸುವ ಸಂಪೂರ್ಣ ಜವಾಬ್ದಾರಿ ಮತ್ತೊಮ್ಮೆ ಖಂಡೇರಾವ ಅವರ ಹೆಗಲಿಗೆ ಬೀಳುತ್ತದೆ. ಈ ಮೊದಲೇ ಆರ್ಥಿಕ ಸಂಕಷ್ಟದಿಂದ ಬಳಲಿ ಬೆಂಡಾಗಿದ್ದ ಖಂಡೇರಾವರಿಗೆ ಕಷ್ಟಗಳು ಒಂದೊಂದಾಗಿ ಬರತೊಡಗಿದವು. ಒಂದು ಕಡೆ ತಾವು ಪ್ರಾರಂಭಿಸಿದ ಕಲಾಶಾಲೆ, ಮತ್ತೊಂದು ಕಡೆ ಕುಟುಂಬದ ಜವಾಬ್ದಾರಿ; ಈ ಕಡೆ ಕಲಾಶಾಲೆ ಬಿಡುವ ಹಾಗಿಲ್ಲ. ಮತ್ತೊಂದೆಡೆ ಸಂಸಾರದ ಜವಾಬ್ದಾರಿಯನ್ನು ನಿರ್ಲಕ್ಷಿಸುವ ಹಾಗಿಲ್ಲ. ಮಾನಸಿಕ ತೊಳಲಾಟದಲ್ಲೇ ಕೆಲ ದಿನಗಳನ್ನು ನೂಕಬೇಕಾಯಿತ್ತು".[೨೫]

ಶರಣಬಸವೇಶ್ವರ ಕಲಾ ಮಾಹಾವಿದ್ಯಾಲಯದಲ್ಲಿ ಚಿತ್ರಕಲಾ ವಿಭಾಗ ಪ್ರಾರಂಬವಾಗುತ್ತದೆ. ಅಲ್ಲಿ ಖಂಡೇರಾವರು ಕಲಾ ಉಪನ್ಯಾಸಕಾಗಿ ಕೆಲಸ ನಿರ್ವಸುತ್ತಲೇ. ಆದರ್ಶ ಕಲಾಶಾಲೆಯನ್ನು ನಡೆಸುತ್ತಿದ್ದರು. ಒಂದು ವರ್ಷ ಕಳೆಯೂತಿದ್ದಂತೆ ಅಲ್ಲಿ ಚಿತ್ರಕಲೆಯನ್ನು ಪ್ರಮುಖ ವಿಷಯವಾಗಿ ದಿನಪಿಡೀ ತರಗತಿಗಳನ್ನು

ಕಲಿಸಬೇಕಾಗಿ ಬರುತ್ತದೆ. ಇಂತಹ ಸಂಕೀರ್ಣ ಪರಿಸ್ಥಿತಿಯಲ್ಲಿ ಎರಡೂ ಕಲಾಶಾಲೆಗಳ ಕಾರ್ಯನಿರ್ವಹಿಸಲು ಖಂಡೇರಾವರಿಗೆ ಸಾಧ್ಯವಾಗುವದರಿಂದ ಕಲಾಶಾಲೆಯ ಜವಾಬ್ದಾರಿ ಅವರ ಶಿಷ್ಯರಾದ ಶಿವಶರಣ ಉಪ್ಪಿನ ಅವರಿಗೆ ವಹಿಸಿಕೊಡುತ್ತಾರೆ. ಕಿರಣಾ ಬಜಾರಿನಿಂದ ಈಗಿರುವ ಕೆ.ಇ.ಬಿ ಕಟ್ಟಡದ ಹಿಂಬಾಗದಲ್ಲಿ ಮೂರುನಾಲ್ಕು ಕೋಣೆಗಳುಳ್ಳ ಕಟ್ಟಡವನ್ನು ಬಾಡಿಗೆಗೆ ಪಡೆದು ಕಲಾಶಾಲೆ ನಡೆಸುವಲ್ಲಿ ತೊಡಗುತ್ತಾರೆ.

೧೯೭೧ರ ಸುಮಾರಿಗೆ ಮಹಾದೇವಪ್ಪ ರಾಂಪುರೆ ವೈದ್ಯಕೀಯ ಮಹಾವಿದ್ಯಾಲಯಲ್ಲಿ ಮಾಡೆಲರ್ ಹುದ್ದೆಗೆ ಆಯ್ಕೆಯಾಗುತ್ತಾರೆ ಇವರು ಕಲಾಶಲೆಯನ್ನು ಬಿಟ್ಟು ಹೊರಬರುತ್ತಾರೆ. ಇನ್ನೇನು ಎಲ್ಲವೂ ಅಂದುಕೊಂಡಂತೆ ಆಯಿತೆಲ್ಲ ಎಂದು ನೆಮ್ಮದಿಯ ನಿಟ್ಟುಸಿರು ಬಿಡುತ್ತಲೇ ಖಂಡೇರಾವರಿಗೆ ಮತ್ತೆ ಆದರ್ಶ ಕಲಾಶಾಲೆಯ ಚಿಂತೆ ಶುರುವಾಗುತ್ತದೆ. ಶರಣಬಸವೇಶ್ವರ ಕಾಲೇಜಿನಲ್ಲಿ ಫೈನ್ ಆರ್ಟ್ ವಿಭಾಗದ ಮುಖ್ಯಸ್ಥರಾಗಿ ನೇಮಕ ಗೊಳ್ಳುತ್ತಾರೆ. ಆದರ್ಶ ಕಲಾಶಾಲೆಯನ್ನು ನೋಡಿಕೊಳ್ಳವವರು ಯಾರೂ ಇರದಿದ್ದಾಗ ಕೆಲಕಾಲ ಕಲಾಶಾಲೆ ಸ್ಥಗಿತವಾಗುತ್ತದೆ.

ತಮ್ಮ ಆದರ್ಶ ಕಲಾಮಂದಿರದ ಜವಾಬ್ದಾರಿಯನ್ನು ಯಾರಿಗೆ ಒಪ್ಪಿಸುವುದು. ವಿದ್ಯಾರ್ಥಿಗಳಲ್ಲಿ ಇದನ್ನು ನೆಡೆಸಿಕೊಂಡು ಹೋಗುವ ಜವಾಬ್ದಾರಿಯನ್ನು ಹುಡುಕುತ್ತಿದ್ದಾಗ ಒಮ್ಮೆಲೆ ತಮ್ಮ ವಿದ್ಯಾರ್ಥಿಯೇ ಆದ ಅಂದಾನಿಯವರು ನೆನಪು ಹೊಳೆಯಿತು. ಅವರು ಆಗತಾನೇ ಡಿಪ್ಲೊಮಾವನ್ನು ಮುಗಿಸಿದ್ದರು. ಇವರು ನಿರಂತರವಾಗಿ ತಮ್ಮನ್ನು ಕಲಾಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದರು ಯಾವಾಗಲೂ ಇವರು ಗಡಿಬಿಡಿಯ ವ್ಯಕ್ತಿಗಳಾಗಿದ್ದರು ಕಲಬುರ್ಗಿಯಲ್ಲಿ ಯಾವುದೇ ಕಲಾಚುವಟಿಕೆಗಳು ನೆಡೆದರೆ ಅಲ್ಲಿ ಅಂದಾನಿಯವರು ಇದ್ದೇ ಇರುತ್ತಿದ್ದರು. ಇವರು ಯುವ ಉತ್ಸಾಹಿ ಕಲಾವಿದರಾಗಿದ್ದರು ಒಳ್ಳೆಯ ಆಡಳಿತವನ್ನು ಮಾಡುವಂತವ ರಾಗಿದ್ದರಿಂದ ಹೀಗಾಗಿ ಅವರಿಗೆ ಈ ಜವಾಬ್ದಾರಿಯನ್ನು ಶ್ರೀ ಖಂಡೇರಾವ್ ದಿವಂಗತ ಢಗೆ ಮತ್ತು ತಿಪ್ಪಣ್ಣ ಮಾಸ್ತರರು ಅಂದಾನಿಯವರಿಗೆ ಈ ಸಂಸ್ಥೆಯನ್ನು ನೆಡೆಸಬೇಕೆಂದು ಒತ್ತಾಯಿಸಿದರು. ಅಂದಾನಿಯವರು ಖಂಡೇರಾವ್ ಅವರಿಗೆ ಸರ್ ನಾನು ಕಲಾಶಾಲೆಯನ್ನು ನೆಡೆಸಿಕೊಂಡು ಹೋಗುತ್ತೇನೆ ಆದರೆ ಶಾಲೆಯ ಸಂಪೂರ್ಣ ಜವಾಬ್ದಾರಿಯನ್ನು ನನಗೆ ವಹಿಸಬೇಕು. ಇದರಲ್ಲಿ ಯಾರು ಹಸ್ತಕ್ಷೇಪ ಮಾಡಬಾರದು, ಏಕೆಂದರೆ ಇಲ್ಲಿ ನನ್ನದೇ ಆದಂತಹ ದೃಷ್ಟಿಕೋನದಿಂದ ನಾನು ಬೆಳೆಸುತ್ತೇನೆ. ಶಾಲೆಯನ್ನು ಸಂಪೂರ್ಣವಾಗಿ ನನ್ನ ಸುಪರ್ಧಿಗೆ ಒಪ್ಪಿಸಿದರೆ ಮಾತ್ರ ತೆಗೆದುಕೊಳ್ಳುತ್ತೇನೆ ಎಂದು ಹೇಳುತ್ತಾರೆ. ಕಲಾಶಾಲೆಯ ಜವಾಬ್ದಾರಿಯನ್ನು ಖಂಡೇರಾವ್ ಅವರು ಅಂದಾನಿಯವರಿಗೆ ವಹಿಸಿದ ನಂತರ ಅಂದಾನಿಯವರು ಆದರ್ಶ ಕಲಾಶಾಲೆಯಲ್ಲಿ ತಮ್ಮನ್ನು ತಾವು ಸಕ್ರಿಯವಾಗಿ ತುಡಗಿಸಿಕೊಳ್ಳುತ್ತಾರೆ.

ಅಂದಾನಿಯವರು ಬೋಧನೆಯ ಜೊತೆಗೆ ಬಿಡುವಿನ ವೇಳೆಯಲ್ಲಿ ಗ್ರಿನೋಬಲ್ಸ್ ಪ್ರಿಂಟಿಂಗ್ ಪ್ರೆಸ್‌ನಲ್ಲಿ ಕೆಲಸ ಮಾಡುತ್ತಿದ್ದರು. ಅಲ್ಲಿ ಬಂದಂತಹ ಹಣವನ್ನು ಕಲಾಶಾಲೆಯ ಬಾಡಿಗೆಗೆ ಕಟ್ಟುತ್ತಿದ್ದರು. ಪ್ರಿಂಟಿಂಗ್ ಪ್ರೆಸ್‌ನಲ್ಲಿ ಕೆಲಸ ಮುಗಿಸಿಕೊಂಡು ಮದ್ಯಾಹ್ನ ಹನ್ನೆರಡು ಘಂಟೆಗೆ ಬಂದ ಮೇಲೆ

ತರಗತಿಗಳನ್ನು ತೆಗೆದುಕೊಳ್ಳುತ್ತಿದ್ದರು. ಹೀಗೆ ರಾತ್ರಿ ಏಳೂ–ಎಂಟು ಘಂಟೆಯವರೆಗೆ ತರಗತಿಗಳು ನಡೆಯುತ್ತಿದ್ದವು. 'ಅಂದಾನಿಯವರ ಮಾರ್ಗದರ್ಶನದಲ್ಲಿ ಕಲಿಯುತ್ತದ್ದ ಪ್ರಥಮ ಬ್ಯಾಚಿನ ವಿದ್ಯಾರ್ಥಿಗಳಾದ ವಿಜಯ ಹಾಗರಗುಂಡಗಿ, ಜಹಿರ, ಎಸ್.ಎಮ್ ನೀಲಾ, ಅಶೋಕ ಹೊನಕೇರಿ, ಮೀನಾಕುಮಾರಿ ಮಾಶಾಳಕರ, ಮುನಿರ ಉನಿಸಾ, ಸರದಾರ ಉನಿಸಾ, ಸುಧಾ ಜಾಗಿರದಾರ,'[೨೬] ಹೀಗೆ ಹನ್ನೊಂದು ವಿದ್ಯಾರ್ಥಿಗಳು ಇದ್ದರು.

೧೯೭೦ ರಿಂದ ೧೯೭೩ರ ವರೆಗೆ ಪ್ರಿಂಟಿಂಗ್ ಪ್ರೆಸ್‌ನಲ್ಲಿ ಮೂರು ವರ್ಷಗಳ ಕಾಲ ಕೆಲಸ ಮಾಡಿದರು. ಸಂಸ್ಥೆಯ ಬೆಳವಣಿಗೆ ಮತ್ತು ಪ್ರಿಂಟಿಂಗ್ ಪ್ರೆಸ್ ಜ್ಞಾನ ಬಹಳಷ್ಟು ಇತ್ತು. ಅಲ್ಲಿ ಕೆಲಸ ಮಾಡುತ್ತ ಆ ಪ್ರಿಂಟಿಂಗ್ ಪ್ರೆಸ್‌ಗೆ ಬೇಕಾದಂತಹ ಪೇಪರ್, ಕಲರ್, ಮೆಷಿನ್‌ಗಳನ್ನು ತರುವುದಕ್ಕೆ ಅಂದಾನಿಯವರು ಹೋಗುತ್ತಿದ್ದರು. ಅವರಿಗೆ ಎಲ್ಲಾ ತರಹದ ಜ್ಞಾನ ಇತ್ತು. ಪೂನಾ, ಬಾಂಬೆ, ದೆಹಲಿಗೆ ಹೋಗುತ್ತಿದ್ದರು. ಅಲ್ಲಿ ಹೋದಂತಹ ಸಂದರ್ಭದಲ್ಲಿ ಅಲ್ಲಿಯ ಕಲಾಶಾಲೆಯ ಕಲಾಚಟುವಟಿಕೆಗಳು, ಅಲ್ಲಿಯ ವಾತಾವರಣ ನೊಡಿಕೊಂಡು ಐಡಿಯಲ್ ಫೈನ್ ಆರ್ಟ್ ಕಲಾಶಾಲೆಯನ್ನು ಅಭಿವೃದ್ಧಿ ಮಾಡುತ್ತಿದ್ದರು. ಅನಿವಾರ್ಯ ಕಾರಣದಿಂದ ೧೯೭೩ರಲ್ಲಿ ಪ್ರಿಂಟಿಂಗ್ ಪ್ರೆಸ್ ಕೆಲಸ ಬಿಟ್ಟು ಹೊರಗೆ ಬಂದು ಕಲಾಸಂಸ್ಥೆಯನ್ನು ನಡೆಸಲು ಹೆಚ್ಚು ಒಲವು ತೋರಿದರು.

ಕಲಾಚವಟುವಟಿಕೆಗಳಲ್ಲಿ ತೊಡಗಿಸಿಕೊಂಡು ಆ ಕಲಾಶಾಲೆಯ ಪ್ರಗತಿಗೆ ಸತತವಾಗಿ ಹೊರಗಿನಿಂದ ಕಲಾವಿದರನ್ನು ಆಹ್ವಾನಿಸಿ ಕಲಾಪ್ರಾತ್ಯಕ್ಷಿಕೆ, ವಿಚಾರ ಸಂಕಿರಣ ಮತ್ತು ಉಪನ್ಯಾಸ ಹೀಗೆ ನಿರಂತರವಾಗಿ ಅನೇಕ ಕಲಾಚಟುವಟಿಕೆಗಳನ್ನು ಹಮ್ಮಿಕೊಳ್ಳುವ ಮುಖಾಂತರ ವಿದ್ಯಾರ್ಥಿಗಳಲ್ಲಿ ಸೃಜನಾತ್ಮಕ ಮನೋಭಾವವನ್ನು ಹುಟ್ಟಿಸಿದರು. ರಾಜ್ಯ, ರಾಷ್ಟ್ರಮಟ್ಟದಲ್ಲಿ ಪ್ರಶಸ್ತಿ ಪಡೆದು ತಮ್ಮನ್ನು ಗುರುತಿಸಿಕೊಳ್ಳುವಂತೆ ಮಾಡಿ ಕಲಾಶಾಲೆಯನ್ನು ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಬೆಳೆಸಿ ಶ್ರಮಿಸುತ್ತಿದ್ದಾರೆ.

ಚಿತ್ರಕಲೆಯನ್ನು ಸ್ನಾತ್ತಕೋತ್ತರವಾಗಿ ಅಭ್ಯಾಸ ಮಾಡಲು ಈ ಜಿಲ್ಲೆಯ ವಿದ್ಯಾರ್ಥಿಗಳು ಧಾರವಾಡ, ಬೆಂಗಳೂರು ಹಾಗೂ ದೂರದ ಮುಂಬೈಗೆ ಹೋಗಿ ಕಲಿಯಬೇಕಾಗಿತ್ತು. ಇದನ್ನರಿತು ಅಂದಾನಿಯವರು ಎಮ್.ಎಮ.ಕೆ ಕಾಲೇಜ್ ಆಫ್ ವಿಜುವಲ್ ಆರ್ಟ್ ಪ್ರಾರಂಭಿಸಿದ್ದರು. ೧೯೮೫ರಲ್ಲಿ ಗುಲಬರ್ಗಾ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದ ಸ್ನಾತಕೋತ್ತರ ಪದವಿ ಕೇಂದ್ರ ಆರಂಭಿಸಿದರು.

### ೧.೩. ಲೈಫ್ ಮ್ಯಾಗಜಿನ್ ಸಂಗ್ರಹ

ಅಂದಾನಿಯವರು ಪ್ರಿಂಟಿಂಗ್ ಪ್ರೆಸ್‌ನಲ್ಲಿ ಕೆಲಸ ಮಾಡುತ್ತಿದ್ದ ಸಂದರ್ಭದಲ್ಲಿ ಅದರ ಪಕ್ಕದಲ್ಲಿ ಒಂದು ಕಿರಾಣಿ ಅಂಗಡಿ ಇತ್ತು. ಆ ಅಂಗಡಿಯವನು ಅಂದಾನಿಯವರ ಗೆಳೆಯನಾಗಿದ್ದ. ಅಂದಾನಿಯವರಿಗೆ ಬೇಜಾರಾದಾಗ ಅವನ ಬಳಿ ಬಂದು ಕುಡುತ್ತಿದ್ದರು. ಒಂದು ದಿನ ಹುಡುಗ ಒಬ್ಬ 'life' ಮ್ಯಾಗಜಿನ್ನು ತಂದು ಅಂಗಡಿಗೆ ಹಾಕಿ ಹೋದನು. ಲೈಫ್ ಮ್ಯಾಗಜಿನ ಜಗತ್ತಿನ ಪ್ರಸಿದ್ಧ ಮ್ಯಾಗಜಿನಾಗಿತ್ತು. ಅದರಲ್ಲಿ ಎರಡನೆಯ ಮಾಹಾಯುದ್ಧದ ದೃಶ್ಯಗಳು, ಆಗಿನ ಕಲಾವಿದರು, ಕಲಾಕೃತಿಗಳು

ಮತು ಲೇಖನಗಳು, ನೆಪೋಲಿಯನ್‌ನ ಸಮಯದಲ್ಲಿನ ಪೋಟೋಗ್ರಾಪಳು ಇರುತ್ತಿದ್ದವು. ಪ್ರಕಟವಾಗುತ್ತಿದ್ದ 'life' ಮ್ಯಾಗಜಿನ್‌ನಲ್ಲಿ ಆ ಸಂದರ್ಭದಲ್ಲಿ ನೆಡೆದಂತಹ ಚೈನಾ ಯುದ್ಧದ ಘಟನಾವಳಿಯ ದೃಶ್ಯಗಳನ್ನು ಸಮಕಾಲೀನ ಸಂದರ್ಭದ ಜೀವನಕ್ರಮ ಮತ್ತು ತಂತ್ರಜ್ಞಾನದ ವಸ್ತುಗಳ ಬಗ್ಗೆ ಈ ಮ್ಯಾಗಜಿನ್‌ನಲ್ಲಿ ಬರುತ್ತಿದ್ದವು. "ಇದನ್ನು ನೋಡಿದ ನನಗೆ ದಂಗ್ ಬಡಿದಾಂಗಾಯಿತು. ಇವು ಎಲ್ಲಾ ಎಷ್ಟಿಕ್ಕೆ ಕೊಡುತಿಯಾ? ಎಂದು ಕೇಳಿದೆ. ಅದಕ್ಕೆ ಪ್ರತಿಯುತ್ತರವಾಗಿ ಅಂಗಡಿಯವನು, ಎ ಹಾಗೆ ಒಯ್ಯೋ ಮಾರಾಯ್ಯಾ? ಎಂದು ಹೇಳಿದ".[೨೭] ಅಂದಾನಿಯವರು ಅವುಗಲನ್ನು ತಂದು ಬೈಂಡಿಂಗ ಮಾಡಿಸಿ ಕಾಲೇಜಿನ ಗ್ರಂಥಾಲಯದಲ್ಲಿ ಅಂತಹ ಸುಮಾರು ೬೦ಕ್ಕಿಂತಲೂ ಹೆಚ್ಚು ಮ್ಯಾಗಜಿನ್‌ಗಳನ್ನು ಸಂಗ್ರಹ ಮಾಡಿದ್ದಾರೆ. ಮುಂದೆ ಟಿವಿ ಬಂದಮೇಲೆ ಇದು ನಿಂತಹೋಯಿತು. ಯಾಕೆಂದರೆ ಇದು ಅಡ್ವೈಟೈಜ್‌ಮೇಲೆ ಮೇಲೆ ಈ ಮ್ಯಾಗಜಿನ ನಡೆಯುತ್ತಿತ್ತು. ಆಗ ಡಿಸ್ಕವರಿ ಚಾನೆಲ್ ರೀತಿಯಲ್ಲೇ ಲೈಫ್ ಮ್ಯಾಗಜಿನ್ ಕಾರ್ಯನಿರ್ವಹಿಸುತ್ತಿತ್ತು. ನಂತರದ ಸುಮಾರು ೭೦-೮೦ರ ದಶಕದಲ್ಲಿ ಈ ಮ್ಯಾಗಜಿನ್ ನಿಂತುಹೋಯಿತು.

ಹಿಗೆ ವಿಶೆಷವಾದಂತಹ ಪತ್ರಿಕೆಯಲ್ಲಿರುವ ಹಳೆಯ ವಸ್ತುಗಳನ್ನು, ಕಲಾವಿದರ ಕಲಾಕೃತಿಗಳು ಅನೇಕ ಕಲಾತ್ಮಕ ವಸ್ತು ಗಳನ್ನು ಸಂಗ್ರಹಿಸುವ ವಿಶಿಷ್ಟವಾದ ಹವ್ಯಾಸ ಬೆಳಸಿಕೊಂಡಿರುವುದರಿಂದ ಕಲೆಯಲ್ಲಿ ಸಾಧನೆ ಮಾಡಲು ಸಾಧ್ಯವಾಯಿತು. ಹೀಗಾಗಿ ತಮ್ಮದೇ ಯಾದಂತಹ ದೃಷ್ಟಿಕೋನ ಬೆಳಿಸಿಕೊಂಡಿದರು.

ಅಂದಾನಿಯವರು ಹೀಗೆ ಹೇಳುತ್ತಾರೆ 'ನಾನು ಇವತ್ತಿನವರೆಗೂ ನೋಡುತ್ತಿದ್ದೇನೆ ಹಲವು ವಿದ್ಯಾರ್ಥಿಗಳಲ್ಲಿ ಸಂಗ್ರಹಿಸುವ ಹವ್ಯಾಸವೇ ಕಡಿಮೆ. ಡಿಗ್ರಿ ಮುಗಿಸಬೇಕು ಅಂತಾರೆ ಹೊರತು ಹಳೆಯ ವಸ್ತುಗಳು ಅಥವಾ ಮಾಹಿತಿಯನ್ನು ಕಲೆಹಾಕುವ ಪ್ರವೃತ್ತಿ ಕಾಣದಾಗಿದೆ. ನಮ್ಮಲ್ಲಿ ವಿದ್ಯಾರ್ಥಿ ವಿಜಯ ಹಾಗರಗುಂಡಗಿ ಹಿಂದಿನ ಕಾಲದ ಹಳೆಯ ವಸ್ತುಗಳನ್ನು ಸಂಗ್ರಹ ಮಾಡುತ್ತಾನೆ. ಅದೇ ರೀತಿ ಅಯ್ಯಾಜುದ್ದಿನ್ ವಿವಿಧ ದೇಶ ಮತ್ತು ಹಿಂದಿನ ಕಾಲದ ನಾಣ್ಯಗಳನ್ನು ಸಂಗ್ರಹಿಸುವ ಹವ್ಯಾಸ ಬೆಳೆಸಿಕೊಂಡಿದ್ದಾನೆ. ಇದನ್ನು ನೋಡಿದರೆ ನಿಜವಾಗಿ ನನಗೆ ತುಂಬಾ ಹೆಮ್ಮೆ ಅನಿಸುತ್ತದೆ.' ಈ ರೀತಿಯಾಗಿ ಅಂದಾನಿಯವರು ಹಾಕಿಕೊಟ್ಟ ಅಡಿಪಾಯ ವಿದ್ಯಾರ್ಥಿಗಳು ನಿಭಾಯಿಸಿಕೊಂಡು ಬರುತ್ತಿದ್ದಾರೆ. ಇದರಿಂದ ಮುಂದಿನ ಪಿಳಿಗೆಗೆ ಹಳೆಯ ಕಾಲದ ವಸ್ತುಗಳ ಬಗ್ಗೆ ತಿಳಿಯಲು ಸಹಾಯಕವಾಗಿದೆ.

ಗುಲಬರ್ಗಾ ಜಿಲ್ಲೆಯಲ್ಲಿ ಬೇರೆ ಯಾವುದಕ್ಕಾದರೂ ಬರಗಾಲವಿದ್ದಿತು. ಕಲೆ, ಸಾಹಿತ್ಯ ಮತ್ತು ಸಂಗಿತಗಳಿಗೆ ಈ ಜಿಲ್ಲೆ ಯಾವತ್ತೂ ಹೆಮ್ಮೆ ತರುವ ವ್ಯಕ್ತಿಗಳನ್ನು ಕೊಡಮಾಡುತ್ತ ಬಂದಿದೆ. ಇಂತಹ ಓರ್ವ ಕಲಾವಿದ ವ್ಹಿ.ಜಿ ಅಂದಾನಿಯವರು. ಕಲಾವಿದನಾದ ಯಾವುದೇ ವ್ಯಕ್ತಿ ಕವಿಯ ಮನಸ್ಸನ್ನೂ ಪಡೆದಿರುತ್ತಾನೆಂದು ಬೇರೆ ಹೇಳುವ ಅಗತ್ಯವಿಲ್ಲ. ಅದರಂತೆ ಅಂದಾನಿಯವರು ಓರ್ವ ಪ್ರತಿಭಾವಂತ

ಕವಿಯೂ ಆಗಿ ಕವಿಯೊಳಗೆ ಕಲಾವಿದನೋ, ಕಲಾವಿದನೊಳಗೆ ಕವಿಯೋ ಎಂಬಂತೆ ಅನೇಕರಿಗೆ ಅಚ್ಚರಿ ಹುಟ್ಟಿಸಿದ್ದುಂಟು.

ಗುಲಬರ್ಗಾದಲ್ಲಿ ಯಾವುದೇ ಸಾಹಿತ್ಯ, ಸಾಂಸ್ಕೃತಿಕ ಕಾರ್ಯಕ್ರಮಗಳು ಜರುಗಲಿ, ಅವಲ್ಲೆದರಲ್ಲೂ ತನ್ನನ್ನು ತಾನೇ ಅರ್ಪಿಸಿಕೊಂಡು ದುಡಿಯುವ ಇವರು ಗುಲಬರ್ಗಾದಲ್ಲಿ ಒಂದು ಸುಸಂಪನ್ನವಾದ ಸಾರ್ವಜನಿಕ ಆಸ್ತಿಯಾಗಿ ತಮ್ಮ ಕಲಾಶಾಲೆಯನ್ನು ರೂಪಿಸಿದ್ದಾರೆ. ಬಂಜರು ಭೂಮಿಯ ಓಯಾಸಿಸ್‌ನಂತೆ ಗುಲಬರ್ಗಾದಲ್ಲೊಂದು ಕಲಾನಿಕೇತನವನ್ನು ನಿರ್ಮಿಸಿಕೊಂಡು ಅದನ್ನು ಕೇವಲ ರಾಜ್ಯಮಟ್ಟಕ್ಕಲ್ಲದೆ ರಾಷ್ಟ್ರ ಮಟ್ಟದವರೆಗೂ ಎತ್ತಿ ನಿಲ್ಲಿಸಿದ್ದಾರೆ. ಈ ಕಲಾನಿಕೇತನದಿಂದ ಹೊರಬಂದ ಅನೇಕ ಕಲಾವಿದರು ರಾಷ್ಟ್ರ ಮಟ್ಟದಲ್ಲಿ ಉಳಿದವರಿಗೆ ಸರಿದೊರೆಯಾಗಿ ಮಿಂಚುತ್ತಿರುವುದೇ ಇದಕ್ಕೆ ಸಾಕ್ಷಿಯೆನ್ನಬಹುದು. ಪ್ರಚಾರದ ಯಾವ ಗೀಳಿಗೂ ಅಂಟಿಕೊಳ್ಳದೇ ತಮ್ಮ ಕಲಾಕಾಯಕದಲ್ಲಿ ನಿರತರಾಗಿದ್ದಾರೆ.

ಗಾಜಿಪೂರದಲ್ಲಿದಲ್ಲಿದ್ದ ಸರಕಾರಿ ಬಾಲಕರ ಪ್ರೌಢಶಾಲೆಯ ವಸತಿನಿಲಯದಲ್ಲಿ ಎಂಟು ವರ್ಷಗಳ ಕಾಲ ಅಂದಾನಿಯವರು ಬಾಡಿಗೆಯ ಆಧಾರದಲ್ಲಿ ಕಲಾ ಶಾಲೆಯನ್ನು ನಡೆಸಿದರು. ೧೯೮೦ ರಲ್ಲಿ ನಗರಸಭೆ ಉದ್ಯಾನ ವನದಲ್ಲಿ ಅಂದಾನಿಯವರಿಗೆ ಒಂದು ಬಯಲು ಜಾಗ ಸಿಗುತ್ತದೆ. ಗಾಜಿಪೂರದಲಿದ್ದ ಕಲಾ ಶಾಲೆಯನ್ನು ನಗರಸಭೆ ಉದ್ಯಾನ ವನದಲ್ಲಿ ಸ್ಥಳಾಂತರಿಸಿದರು. ಅಲ್ಲಿ ವ್ಯವಸ್ಥಿತವಾದ ಕಟ್ಟಡಗಳು ಇರಲಿಲ್ಲ, ತಗಡುಗಳನ್ನು ಹಾಕಿ ತರಗತಿಗಳನ್ನು ಆರಂಭಿಸಿದರು. ಆ ಜಾಗ ಕೊಟ್ಟವರು ಮಾತೋಶ್ರೀ ಮಾಣಿಕ್ಯ ಬಾಯಿ ಕೋಟಾರಿಯವರು ಒಂದು ಷರತ್ತು ಹಾಕಿದ್ದರು. "ಎರಡು ವರ್ಷದಲ್ಲಿ ಕಲಾ ಶಾಲೆ ಕಟ್ಟದಿದ್ದರೆ ಅದನ್ನು ಮರಳಿ ತೆಗೆದುಕೊಳ್ಳುತೇವೆ" ಎಂದು. ಛಲದಿಂದ ಕಲಾಶಾಲೆಯನ್ನು ಕಟ್ಟಿದ್ದರು. ಅಂದು ಆ ಮಾತುಗಳೇ ಇಂದು ಕಲಾಶಾಲೆಯು ಅಂತರಾಷ್ಟ್ರೀಯ ಮಟ್ಟದಲ್ಲಿ ಬೆಳೆಯಲು ಪ್ರೇರಕ ಶಕ್ತಿಯಾಯಿತು.

**೧.೪. ಡಿ.ಟಿ.ಸಿ ಮತ್ತು ಡಿ.ಎಂ.ಸಿ**

ಕಲಾನಿಕೇತನದಲ್ಲಿ ಮೊದಲು ಡಿಪ್ಲೊಮಾ ಮಾತ್ರ ಇತ್ತು. ನಂತರ ಡಿ.ಟಿ.ಸಿ. (ಡ್ರಾಯಿಂಗ್ ಟೀಚರ್ ಟ್ರೈನಿಂಗ್ ಕೋರ್ಸ್) ನಡೆಸಲು ಅನುಮತಿ ಸಿಕ್ಕ ಮೇಲೆ ವಿದ್ಯಾರ್ಥಿಗಳಿಗೆ ಈ ಕೋರ್ಸ್‌ಗೆ ಸಂಬಂಧಿಸಿದಂತೆ ಪಾಠ ಹೇಳಬೇಕಾಗುತ್ತಿತ್ತು. ಇಸಂ ಅಂದರೇನು? ಮೆಥಡಾಲಜಿ ಬಗ್ಗೆ ಮತ್ತು ಸೌಂದರ್ಯ ಮೀಮಾಂಸೆ ಹೀಗೆ ಅನೇಕ ವಿಷಯಕ್ಕೆ ಸಂಬಂಧಿಸಿದಂತೆ ಪಾಠ ಹೇಳಬೇಕಾಗುತ್ತಿತ್ತು. ಆದರೆ ಈ ವಿಷಯದ ಕುರಿತಾದ ಪುಸ್ತಕಗಳು ಕನ್ನಡದಲ್ಲಿ ಲಭ್ಯವಿರುತ್ತಿರಲಿಲ್ಲ. ಹೀಗಾಗಿ ಮುಂಬಯಿಗೆ ಹೋಗಿ ೨೦೦೦ ರೂಪಾಯಿಗಳ ಪುಸ್ತಕಗಳನ್ನು ಖರೀದಿಸಿಕೊಂಡು ಬಂದರು. ಆ ಎಲ್ಲಾ ಪುಸ್ತಕಗಳು ಕೇವಲ ಇಂಗ್ಲೀಷ್ ಮತ್ತು ಮರಾಠಿಯಲ್ಲಿ ಮಾತ್ರ ಇರುತ್ತಿದ್ದವು. ಇಂತಹ ಸಂದರ್ಭದಲ್ಲಿ ಹೈಸ್ಕೂಲ್‌ನಿಂದ ನಿವೃತ್ತಿ ಹೊಂದಿದ್ದ ಸಂಗೀತ ಶಿಕ್ಷಕರೊಬ್ಬರು ಆಗಾಗ ಕಲಾನಿಕೇತನಕ್ಕೆ ಬರುತ್ತಿದ್ದರು. ಮರಾಠಿಯಲ್ಲಿ

ಇದ್ದಂತಹ ವಿಷಯವನ್ನು ಕನ್ನಡಕ್ಕೆ ಅನುವಾದಿಸಿಕೊಟ್ಟರೆ, ಚಳ್ಳಿಗೇರಿಯವರು ನಿವೃತ್ತ ನೌಕರರಾಗಿದ್ದರು. ಇವರು ಇಂಗ್ಲೀಷ್‌ನಿಂದ ಕನ್ನಡಕ್ಕೆ ಅನುವಾದಿಸಿ ಹೇಳಿದುದನ್ನು ಅಂದಾನಿಯವರು ಡೈರಿಯಲ್ಲಿ ಬರೆದುಕೊಳ್ಳುತ್ತಿದ್ದರು. ಈ ರೀತಿಯಾಗಿ ಕಲೆಗೆ ಸಂಬಂಧಿಸಿದಂತೆ ಯಾವುದೇ ಮಾಹಿತಿ / ವಿಷಯವಿರಲಿ ಅದನ್ನು ಕನ್ನಡಕ್ಕೆ ಅನುವಾದಿಸಿಕೊಂಡು ವಿದ್ಯಾರ್ಥಿಗಳಿಗೆ ಪಾಠ ಹೇಳುತ್ತಿದ್ದರು. ಆ ಡೈರಿಗಳನ್ನು ಅಂದಾನಿಯವರು ಇಂದಿನವರೆಗೂ ಸುರಕ್ಷಿತವಾಗಿ ಕಾಪಾಡಿಕೊಂಡು ಬಂದಿದ್ದಾರೆ. "ಇಂತಹ ಕೊರತೆಯನ್ನು ಕಂಡು ಅಂದಾನಿಯವರು ಮತ್ತು ಆರ್.ಎಂ. ಹಡಪದರು ಸೇರಿ ಮೊಟ್ಟಮೊದಲ ಕಲಾಶಿಕ್ಷಣ ಪಠ್ಯಕ್ರಮ ತಯಾರಿಸಿದರು."[೨೮] ವಿದ್ಯಾರ್ಥಿಗಳಿಗೆ ಅನಕೂಲವಾಗುವಂತೆ ಮಾಡಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಕಲಾಶಾಲೆಯ ಪ್ರಾರಂಭದಲ್ಲಿ ಡಿಪ್ಲೊಮಾ ತರಗತಿಗಳು ಮಾತ್ರ ಇದ್ದವು. ೧೯೭೪ರಿಂದ ೧೯೮೨ರ ವರೆಗೆ ಒಂದು ವರ್ಷದ ಡಿ.ಟಿ.ಸಿ. ಇತ್ತು. ನಂತರ ೧೯೮೨-೮೩ ನೇ ಸಾಲಿಗೆ ರಾಜ್ಯ ಸರ್ಕಾರ ಹೊಸ ಅಭ್ಯಾಸ ಪತ್ರಿಕೆಯನ್ನು ಪ್ರಾರಂಭಿಸಿ ಡಿ.ಟಿ.ಸಿ ಬದಲಾಗಿ ಡಿ.ಎಂ.ಸಿ. (ಡ್ರಾಯಿಂಗ್ ಮಾಸ್ಟರ್ ಕೋರ್ಸ್) ಎಂಬ ಎರಡು ವರ್ಷದ ಕೋರ್ಸ್ ಪ್ರಾರಂಭಿಸಿತು. ಇದರಿಂದ ವಿದ್ಯಾರ್ಥಿಗಳಿಗೆ ಹೆಚ್ಚಿನ ಅಭ್ಯಾಸ ನಡೆಸಲು ಅನುಕೂಲವಾಯಿತು. ಮುಂದೆ ೧೯೮೮-೮೯ನೇ ಸಾಲಿಗೆ ಮೂರನೇ ವರ್ಷದ ಡ್ರಾಯಿಂಗ್ ಮತ್ತು ಪೇಂಟಿಂಗ್ ವರ್ಗ ೧೯೯೦-೯೧ ನೇ ಸಾಲಿಗೆ ಅಭ್ಯಾಸ ಮಾಡಲು ಈ ಕಲಾಶಾಲೆಯು ಅನುವು ಮಾಡಿಕೊಟ್ಟಿತು."[೨೯] ಇಂತಹ ಪ್ರತಿಷ್ಠಿತ ಕಲಾಶಾಲೆಯಲ್ಲಿ ಪ್ರತಿ ವರ್ಷವೂ ಕೂಡ ನಾಡಿನ ಹೆಸರಾಂತ ಕಲಾವಿದರಿಂದ ಪ್ರಾತ್ಯಕ್ಷಿಕೆಗಳನ್ನು ನಡೆಸುವ ಮೂಲಕ ವಿದ್ಯಾರ್ಥಿಗಳಿಗೆ ಸಮಕಾಲೀನ ಕಲೆಯ ರೂಪುರೇಷೆಗಳನ್ನು ತಿಳಿಸುವ ಪ್ರಯತ್ನ ಮಾಡಲಾಗುತ್ತಿದೆ. ಈ ಹಿನ್ನಲೆಯಲ್ಲಿ ದಿ ಐಡಿಯಲ್ ಸಂಸ್ಥೆಯಲ್ಲಿ ನಾಡಿನ ಹೆಸರಾಂತ ಕಲಾವಿದರು, ಸ್ಥಳೀಯ ಕಲಾವಿದರು, ರಾಷ್ಟ್ರ ಮತ್ತು ಅಂತಾರಾಷ್ಟ್ರೀಯ ಕಲಾವಿದರು ಸಹಿತ ಇಲ್ಲಿ ಪ್ರಾತ್ಯಕ್ಷಿಕೆ ನೀಡಿದ್ದಾರೆ. 'ಅವರಲ್ಲಿ ಕೆ.ಜಿ ಸುಬ್ರಮಣ್ಯ, ದೇವಿಕಿನಂದ ಶರ್ಮಾ, ಕೆ.ಕೆ ಹೆಬ್ಬಾರ, ಎಂ.ಬಿ. ಪಾಟೀಲ, ಜೆ.ಎಸ್. ಖಂಡೇರಾವ್, ಇನ್ನೂ ಅನೇಕ ಕಲಾವಿದರು ಪ್ರಾತ್ಯಕ್ಷಿಕೆಗಳನ್ನು ನೀಡಿದ್ದಾರೆ. ಇದಲ್ಲದೆ ರಾಷ್ಟ್ರ ಅಂತರಾಷ್ಟ್ರಮಟ್ಟದ ಕಲಾಪ್ರದರ್ಶನಗಳನ್ನು ಈ ಕಲಾಶಾಲೆ ಯಶಸ್ವಿಯಾಗಿ ನಡೆಸಿಕೊಂಡು ಬರುತ್ತಿದೆ.

ಪ್ರಸ್ತುತ ದಿ ಐಡಿಯಲ್ ಸಂಸ್ಥೆಯ ಹೆಸರಾಂತ ಕಲಾವಿದರುಗಳಾದ ಚಂದ್ರಹಾಸ ಜಾಲಿಹಾಳ, ಬಸವರಾಜ ಜಾನೆ, ಶಶಿಕಾಂತ ಮಾಶಾಳಕರ, ಲೋಕಯ್ಯ ಕಟ್ಟಿಮಠ, ಚಂದ್ರು, ರಾಜಶೇಖರ, ಗಡ್ಕರ ಮುಂತಾದವರು ಉಪನ್ಯಾಸಕರಾಗಿದ್ದಾರೆ. ಪ್ರಸ್ತುತ ಪ್ರಾಚಾರ್ಯರಾಗಿರುವ ಪೂರ್ಣಿಮಾ ಪಾಟೀಲ, ವ್ಹಿ.ಜಿ ಅಂದಾನಿ ಅವರ ಪ್ರೋತ್ಸಾಹ ಹಾಗೂ ಎಲ್ಲಾ ಅಧ್ಯಾಪಕವೃಂದದವರ ಸಹಕಾರದೊಂದಿಗೆ ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. ಈ ಕಲಾಶಾಲೆಯಲ್ಲಿ ಅಧ್ಯಯನಗೈದ ವಿದ್ಯಾರ್ಥಿಗಳು ಇಂದು ರಾಷ್ಟ್ರ ಮತ್ತು ಅಂತಾರಾಷ್ಟ್ರೀಯ ಮಟ್ಟದ ಕಲಾವಿದರಾಗಿ ತಾವು ಕಲಿತ ಕಲಾಶಾಲೆಗೆ ಹಾಗೂ ಗುರುಗಳಿಗೆ ಕೀರ್ತಿ ತರುವುದರೊಂದಿಗೆ ದೃಶ್ಯಕಲಾ ಕ್ಷೇತ್ರದಲ್ಲಿ ತಮ್ಮನ್ನು ತಾವು ಗುರುತಿಸಿಕೊಂಡಿದ್ದಾರೆ. ಇಂತಹ ಪ್ರತಿಷ್ಠಿತ ಕಲಾಶಾಲೆಯ ನಿರ್ದೇಶಕರಾಗಿ ಅಂದಾನಿಯವರು ಇಂದಿಗೂ ಕೂಡ ಕಾರ್ಯನಿರ್ವಹಿಸುತ್ತಿದ್ದಾರೆ.

‘ಆದರ್ಶ ವಿದ್ಯಾರ್ಥಿಯಾದವನು ಆದರ್ಶ ಶಿಕ್ಷಕನಾಗುತ್ತಾನೆ’ ಎಂಬ ಮಾತು ಸರ್ವವಿದಿತ. ಅಂದಾನಿಯವರು ಅದೇ ಕಾಲೇಜಲ್ಲಿ ಓದುತ್ತಿದ್ದಾಗ ಅಲ್ಲಿಯ ಶಿಕ್ಷಕರ ಪ್ರೀತಿಗೆ ಪಾತ್ರರಾಗಿದ್ದರು. ನಂತರ ಅದೇ ಸ್ಕೂಲಿಗೆ ಬಂದು ಮುನ್ನೆಡೆಸಲು ಆರಂಭಿಸಿದ ಮೇಲೆ ವಿದ್ಯಾರ್ಥಿಗಳ ಪಾಲಿಗೆ ನೆಚ್ಚಿನ ಗುರುಗಳೂ ಆದರು. ಅನುಭವದಿಂದ ಹೊಸ ಹೊಸ ತಂತ್ರಗಳನ್ನು ಅಳವಡಿಸಿಕೊಂಡು ಬೋಧನೆ ಮಾಡುತ್ತಾ ಬಂದರು.

ವರ್ಗದಲ್ಲಿ ಬೋಧನೆಯನ್ನು ನಿಯಮಿತವಾಗಿ ಕಟ್ಟುನಿಟ್ಟಿನಿಂದ ಬೋಧಿಸುವುದು, ಶಾಲಾ ಅವಧಿಗೆ ಮುನ್ನವೇ ಬರುವುದು ಹಾಗೂ ನಂತರ ಇಲ್ಲಿನ ವಿದ್ಯಾರ್ಥಿಗಳೊಂದಿಗೆ ವಿದ್ಯಾರ್ಥಿಯಾಗಿ ಬೆರೆತು ಅವರಲ್ಲಿ ಕಲೆಯ ಬಗ್ಗೆ ಹೆಚ್ಚಿನ ಆಸಕ್ತಿ, ಅಭಿರುಚಿ, ಹೆಚ್ಚಿಸುತ್ತಾರೆ. ವಿದ್ಯಾರ್ಥಿಗಳಿಗೆ ಆತ್ಮವಿಶ್ವಾಸ, ಶಿಸ್ತು, ಸೌಂದರ್ಯ ಪ್ರಜ್ಞೆ, ಕ್ರಿಯಾಶೀಲತೆ, ನಿರೀಕ್ಷಣೆ, ಸ್ಮರಣೆ, ಕಲ್ಪನೆ, ಸಂಯೋಜನೆ, ರೇಖಾ ಲಾಲಿತ್ಯಗಳನ್ನು ಹಾಗೂ ವರ್ಣ ಸಂಯೋಜನೆ ಮುಂತಾದ ಕೌಶಲ್ಯಗಳನ್ನು ತಮ್ಮ ಪಾಠ ಬೋಧನೆಯ ಅವಧಿಯಲ್ಲಿ ಮನದಟ್ಟಾಗುವಂತೆ ಬೋಧಿಸುತ್ತಾರೆ. ಇವರ ವಿದ್ಯಾರ್ಥಿಗಳು ಇಂದಿಗೂ ಇವರನ್ನು ಸ್ಮರಿಸಿಕೊಂಡು ಭಕ್ತಿ ಗೌರವಗಳಿಂದ ಕಾಣುತ್ತಿರುವುದೇ ಇವರ ಸೇವೆಯ ಸಾರ್ಥಕತೆಯನ್ನು ಬಿಂಬಿಸುತ್ತದೆ. ಇವರ ಮಾರ್ಗದರ್ಶನದಲ್ಲಿ ಕಲಿತವರು ಇಂದು ದೇಶ ವಿದೇಶಗಳಲ್ಲಿ ತಮ್ಮ ಕಲಾಪ್ರದರ್ಶನಗಳನ್ನು, ಪ್ರಾತ್ಯಕ್ಷಿಕೆಗಳನ್ನು, ನೀಡುತ್ತಾ ದೇಶದ ಎಲ್ಲೆಡೆಗೂ ಪಸರಿಸುತ್ತಿದ್ದಾರೆ. ಕಲಿಸಿದ ಗುರುಗಳಿಗೆ, ಸಂಸ್ಥೆಗೆ ಕೀರ್ತಿ ತರುತ್ತಿದ್ದಾರೆ. ಅಂತಹ ಸಾಧನೆಗೆ ಪಾತ್ರರಾದ ವಿದ್ಯಾರ್ಥಿಗಳಲ್ಲಿ ಪ್ರಮುಖರಾದವರಲ್ಲಿ ದೇಶದ ಕಲಾವಿದರ ಸಾಲಿನಲ್ಲಿ ಸೇರ್ಪಡೆಯಾಗಿ ಅಂತಾರಾಷ್ಟ್ರೀಯ ಕಲಾವಿದರಾಗಿ ಎದ್ದುಕಾಣುತ್ತಿರುವ ವಿಜಯ ಹಾಗರಗೂಂಡಗಿ, ಜಿ.ಆರ್ ಈರಣ್ಣ, ಅಯ್ಯಾಜುದಿನ್ ಪಟೇಲ, ಶರಣು ಅಳ್ಳೋಳ್ಳಿ ಕಲಾವಿದರ ಸಾಲಿನಲ್ಲಿ ಸೇರ್ಪಡೆಗೊಂಡಿದ್ದಾರೆ. ಇವರಂತೆ ವಿರೇಂದ್ರ ಶಾ, ಅಮೃತ ಸಾವು, ಸಂತೋಷ ಅಂದಾನಿ, ಗಿರೀಶ ಕುಲಕರ್ಣೀ, ಅಂಬಾರಯ ಚನಮಳ್ಳಿ, ಪ್ರಭು ಹರಸೂರ, ಅವಿನಾಶ ಬೊವಿ, ಅಣ್ಣಾರಾಯ ಹಂಗರಗಿ, ಮೊದಲಾದವರು ಇವರ ಮಾರ್ಗದರ್ಶನದಲ್ಲಿ ಬೆಳೆದು ದೃಶ್ಯಕಲಾ ಕ್ಷೇತ್ರಕ್ಕೆ ಕೀರ್ತಿ ತರುವಂತೆ ಬಾಳುತ್ತಿದ್ದಾರೆ.

“೨೦೦೮ ರಲ್ಲಿ ಸಿಂಗಾಪೂರದಲ್ಲಿ ನಡೆದ ಅಂತರಾಷ್ಟ್ರೀಯ ಮಟ್ಟದ ಕಲಾಶಿಬಿರದಲ್ಲಿ ಸಂಸ್ಥೆಯ ವಿದ್ಯಾರ್ಥಿ ಖ್ಯಾತ ಕಲಾವಿದ ಜಿ.ಆರ್ ಈರಣ್ಣ ಅವರು ರಚಿಸಿದ ಚಿತ್ರವೊಂದು ಒಂದು ಕೋಟಿಗೆ ಮಾರಾಟವಾಗಿದ್ದು”.[೩೦] ಅದರಂತೆ ೨೦೧೧ ರಲ್ಲಿ ಹಾಂಕಾಂಗ್‌ನಲ್ಲಿ ನಡೆದ ಅಂತರಾಷ್ಟ್ರೀಯ ಮಟ್ಟದ ಪ್ರದರ್ಶನದಲ್ಲಿ ಶರಣು ಅಳ್ಳೋಳಿ ಅವರು ರಚಿಸಿದ್ದ ಕಲಾಕೃತಿ ಮೂವತ್ತು ಲಕ್ಷಕ್ಕೆ ಮಾರಾಟವಾಗಿದೆ. ಹೆಮ್ಮೆಯ ವಿಷಯ ಎಂದು ಅಂದಾನಿಯವರು ಹೇಳುತ್ತಾರೆ.

### ೧.೫. ಬೋಧನಾ ವಿಧಾನ

ಅಂದಾನಿಯವರು ಐಡಿಯಲ್ ಫೈನ್ ಆರ್ಟ್ ಸಂಸ್ಥೆಯ ಶಿಕ್ಷಕರ ವೃಂದದೊಂದಿಗೆ ತುಂಬಾ ಆತ್ಮೀಯ ಸಂಬಂಧವನ್ನು ಇಟ್ಟುಕೊಂಡಿದ್ದಾರೆ. ಆದ್ದರಿಂದ ಇದು ಕಲಾಶಾಲೆ ಎನ್ನುವುದಕ್ಕಿಂತ ಕಲಾ

ಕುಟುಂಬವೇ ಆಗಿದೆ ಎನ್ನಬಹುದು. ಆ ರೀತಿಯ ವಾತಾವರಣವನ್ನು ಅವರು ನಿರ್ಮಾಣ ಮಾಡಿದ್ದಾರೆ. ಇಲ್ಲಿ ಚಿತ್ರಕಲೆಯ ಬಗ್ಗೆ ಯಾವುದೇ ಜ್ಞಾನವಿರದ ಒಬ್ಬ ವಿದ್ಯಾರ್ಥಿಗೆ ಚಿತ್ರಕಲೆಯ ಕುರಿತಾದ ಶಾಸ್ತ್ರಿಯ ಶಿಕ್ಷಣ (ಅಕಾಡೆಮಿಕ್ ಸ್ಟಡಿ), ಅದನ್ನು ಕೊಡಿಸುವ ರೀತಿ ಹಾಗೂ ಹೇಳುವಂತ ಆಸಕ್ತಿ, ಅವನಿಗೆ ಕಲೆಯ ಬಗ್ಗೆ ಎಲ್ಲ ರೀತಿಯ ಮಾಹಿತಿಯನ್ನು ಕೊಡುವುದರೊಂದಿಗೆ ಅವನಿಗೆ ಏಕಾಗ್ರತೆಯನ್ನು ನಿರ್ಮಾಣ ಮಾಡುತ್ತಿದ್ದರು.

ವಿದ್ಯಾರ್ಥಿಗಳಿಗೆ ಕಲಾಶಾಲೆಯಲ್ಲಿ ಸಮಯ ಎನ್ನುವುದು ಇರುತ್ತಿರಲಿಲ್ಲ. ಬೆಳಿಗ್ಗೆ ೮ ಘಂಟೆಗೆ ಕೆಲಸ ಪ್ರಾರಂಭ ಮಾಡಿದರೆ, ರಾತ್ರಿ ಹತ್ತು, ಹನ್ನೆರಡು ಗಂಟೆಯವರೆಗೂ ಸಾಗುತ್ತಿತು. ಕೆಲವೊಮ್ಮೆ ಒಂದು ಘಂಟೆಯವರೆಗೂ ಪೇಂಟಿಂಗ್ ಮಾಡುತ್ತಾ ಇರುತ್ತಿದ್ದರು. ಇಂದಿಗೂ ಇದೇ ರೀತಿಯ ವಾತಾವರಣ ಅಲ್ಲಿದೆ

“ಶಾಲೆಯಲ್ಲಿ ಅಂದಾನಿಯವರು ವಿದ್ಯಾರ್ಥಿಗಳಲ್ಲಿ ಎಷ್ಟರ ಮಟ್ಟಿಗೆ ಕಲಿಯುವ ಆಸಕ್ತಿಯನ್ನು ಹುಟ್ಟಿಸಿದ್ದರೆಂದರೆ, ನಿತ್ಯವೂ ವಿದ್ಯಾರ್ಥಿಗಳು ಶಿಕ್ಷಕರು ಬರುವುದಕ್ಕೂ ಮೊದಲೇ ಶಾಲೆಗೆ ಬಂದು ತಮ್ಮ ಅಧ್ಯಯನ ಕಾರ್ಯದಲ್ಲಿ ನಿರತರಾಗುತ್ತಿದ್ದರು. ವಿದ್ಯಾರ್ಥಿಗಳನ್ನು ತೊಡಗಿಸಿಕೊಳ್ಳುವೇ ಅನ್ನುವುದಕ್ಕಿಂತ ಅದರಲ್ಲಿ ಅವನಿಗೆ ಆಸಕ್ತಿ ಮೂಡಿಸಿ ತಾನೆ ಭಾಗಿಯಾಗುವಂತೆ ಶಿಕ್ಷಣ ಕೊಡುವ ಕೌಶಲ್ಯ  ಅಂದಾನಿಯವರಲ್ಲಿತ್ತು. ಹಾಗೆಯೇ ಇದೇ ರೀತಿಯಾದ ಶಿಕ್ಷಣವನ್ನು ವಿದ್ಯಾರ್ಥಿಗಳಿಗೆ ನೀಡಬೇಕೆಂಬ ತರಬೇತಿಯನ್ನು ಅಂದಾನಿಯವರು ತಮ್ಮ ಶಾಲಾ ಶಿಕ್ಷಕರಿಗೆ ಕೊಡುತ್ತಿದ್ದರು”.[೩೧] ಆಧುನಿಕತೆ, ತಂತ್ರಗಾರಿಕೆ, ಶೈಲಿ ಇವುಗಳ ಮೂಲಕ ಕಲಾಕ್ಷೇತ್ರದಲ್ಲಿ ವಿದ್ಯಾರ್ಥಿಯನ್ನು ಹೇಗೆ ಬೆಳೆಸಬೇಕೆಂಬ ಪರಿಕಲ್ಪನೆ ಅಂದಾನಿಯವರಿಗಿದೆ. ಈ ವಾತಾವರಣ ನಿರ್ಮಾಣ ಮಾಡಬೇಕಾದರೆ ಅವರು ತಮ್ಮ ಕುಟುಂಬಕ್ಕಿಂತ ಹೆಚ್ಚು ಸಮಯವನ್ನು ಕಲಾ ವಿದ್ಯಾರ್ಥಿಗಳಿಗೆ ಕೊಡುತ್ತಿದ್ದರು. ಕುಟುಂಬದಲ್ಲಿ ಎಲ್ಲಾ ಆಗುಹೋಗುಗಳ ಜವಾಬ್ದಾರಿಯನ್ನು ಕುಟುಂಬದವರಿಗೆ ವಹಿಸಿ ತಮ್ಮನ್ನು ಸಂಪೂರ್ಣವಾಗಿ ಕಲಾಶಾಲೆಗೆ ಮೀಸಲಿಟ್ಟಿದ್ದರು. ಕಲಾಶಾಲೆ ನಮ್ಮೆಲ್ಲರ ಆಸ್ತಿ ಇದು ಕರ್ನಾಟಕದ ಕಲಾವಿದರ ಆಸ್ತಿ ಅನ್ನುವ ಭಾವನೆ ಅಂದಾನಿಯವರಿಗಿದೆ.

ಶಾಸ್ತ್ರೀಯ ಶಿಕ್ಷಣ ಕೊಡಬೇಕಾದಾಗ ಸವಿಸ್ತಾರವಾಗಿ ಹೇಳುತ್ತಿದ್ದರು. ಯಥಾದರ್ಶನ, ನೈಜಚಿತ್ರಣ ಅದರ ಹಾವ ಭಾವ, ನಿಸರ್ಗಚಿತ್ರ, ಭಾವಚಿತ್ರ ಎಲ್ಲವನ್ನೂ ದಿ. ಎಂ.ಬಿ. ಲೋಹಾರ್ ಅವರು ತಿಳಿಸಿಕೊಡುತ್ತಿದ್ದರು. ಆದರೆ, ರೇಖಾಚಿತ್ರ ಮಾಡುವಂತಹ ವಿಧಾನ, ಬಣ್ಣಗಳ ಬಳಕೆ, ಬ್ಲ್ಯಾಕ್ ಆ್ಯಂಡ್ ವೈಟ್ ಅಂದರೇನು? ಅದನ್ನು ಬಳಸುವ ತಂತ್ರಗಾರಿಕೆ, ಶೈಲಿ, ಮೈವಳಿಕೆ, ರೇಖೆಗಳನ್ನು ಯಾವ ರೀತಿಯಿಂದ ಬಳಸಿಕೊಳ್ಳಬೇಕು ಅನ್ನುವುದನ್ನು ವಿದ್ಯಾರ್ಥಿಗಳಿಗೆ ಮನದಟ್ಟಾಗುವ ರೀತಿಯಲ್ಲಿ ಬೋಧನೆ ಮಾಡುತ್ತಿದ್ದರು. ರೇಖಾ ಚಿತ್ರ ರಚನೆಯ ಪರಿಕರಗಳಾದ ಚಾರ್ಕೋಲ್, ಇಂಕ್, ಪೆನ್ನು ಇವುಗಳಿಗಷ್ಟೇ  ಸೀಮಿತಗೊಳಿಸದೇ ಯಾವುದೇ ಮಾಧ್ಯಮ ಕೊಟ್ಟರೂ ಆ ಮಾದ್ಯಮದ ವೈವಿಧ್ಯತೆಯನ್ನು ತಿಳಿದುಕೊಳ್ಳುವ ರೀತಿಯಲ್ಲಿ ರಚನೆ ಮಾಡುವಂತಹ ವಿಧಾನ ಮತ್ತು ತಂತ್ರಗಳನ್ನು ಹೇಳುತ್ತಿದ್ದರು.

## ಕಲಾ ಚಟುವಟಿಕೆ

ಇನ್ನೊಂದು ವಿಶೇಷವೆಂದರೆ ಅವರು ತರಗತಿಯನ್ನು ತೆಗೆದುಕೊಂಡರೆ ಎರಡು ಮೂರು ಘಂಟೆಗಳ ಕಾಲ ನಿರಂತರವಾಗಿ ಪಾಠ ಬೋಧನೆ ಮಾಡುತ್ತಿದ್ದರು. ಅಲ್ಲದೆ ಬೋಧನೆಯ ಜೊತೆಗೆ ಬೆಂಗಳೂರು, ಡೆಲ್ಲಿ, ಮದ್ರಾಸು ಬಾಂಬೆ ಮುಂತಾದ ಕಡೆಗಳಲ್ಲಿ ಕೆಲಸದ ಮೇಲೆ ಹೋಗಿ ಬರುತ್ತಿದ್ದರು. ಆ ಸಂದರ್ಭದಲ್ಲಿ ಕಲಾ ಚಟುವಟಿಕೆಗಳಲ್ಲಿ ಆಗುವಂತಹ ಬದಲಾವಣೆಗಳನ್ನು ಮತ್ತು ಆಯಾಮಗಳನ್ನು ತಮ್ಮ ಗ್ರಹಿಕೆಯಲ್ಲಿ ತುಂಬಿಕೊಂಡು ಬರುತ್ತಾ ಇದ್ದರು. ಅದನ್ನು ತುಂಬಿಕೊಂಡು ಬಂದು ಆ ವಿಷಯವನ್ನು ಎಲ್ಲಾ ವಿದ್ಯಾರ್ಥಿಗಳಿಗೆ ಹೇಳುತ್ತಿದ್ದರು. ಕಲಾಕೃತಿಯನ್ನು ಜನರಿಗೆ ಮುಟ್ಟಿಸಬೇಕು ಮತ್ತು ಹೊಸ ಹೊಸ ಕಲಾಕೃತಿಗಳನ್ನು, ಕಲಾವಿದರನ್ನು ಪರಿಚಯಿಸಬೇಕು ಎನ್ನುವ ಉದ್ದೇಶದೊಂದಿಗೆ 'ಐಡಿಯಲ್ ಫೈನ್ ಆರ್ಟ ಸಂಸ್ಥೆ'ಯಲ್ಲಿ ಎರಡು ವರ್ಷಗಳಿಗೊಮ್ಮೆ "ಬೆಂಗಳೂರು ಮುಂಬಯಿ, ಹಾಗೂ ದೇಶದ ನಾನಾ ಭಾಗಗಲ್ಲಿ ವಿದ್ಯಾರ್ಥಿಗಳ ಕಲಾಕೃತಿಗಳ ಮಾರಾಟ, ಮಿಕ್ಸಡ್ ಬ್ಯಾಗ್' ಎನ್ನುವ ಶೀರ್ಷಿಕೆಯಡಿಯಲ್ಲಿ ಕಲಾ ಪ್ರದರ್ಶನಗಳನ್ನು ನಡೆಸಿಕೊಂಡು ಬರಲಾಗುತ್ತಿದೆ".[೩೨]

"ಅಂದಾನಿಯವರು ೧೯೮೨-೮೩ ರಲ್ಲಿ ರಾಷ್ಟ್ರಮಟ್ಟದ ಶಿಬಿರಗಳನ್ನು ಅಯೋಜಿಸಿ ಕೆ.ಕೆ. ಹೆಬ್ಬಾರ, ಎನ್. ಎಸ್. ಬೇಂದ್ರೆ, ಸುನಿಲದಾಸ್, ಎ.ಎ.ಆಲಮೇಲಕರ್ ಮುಂತಾದ ಭಾರತದ ಪ್ರಸಿದ್ಧ ಕಲಾವಿದರನ್ನು ಆಹ್ವಾನಿಸಿದ್ದರು".[೩೩] ವಿದ್ಯಾರ್ಥಿಗಳಿಗೆ ಕಲಾಶಿಬಿರ, ಕಲಾಪ್ರಾತ್ಯಕ್ಷಿಕೆ, ಕಾರ್ಯಾಗಾರಗಳನ್ನು ಹಮ್ಮಿಕೊಳ್ಳುವುದರ ಜೊತೆಗೆ ಪ್ರತಿ ಶನಿವಾರ ಸ್ಲೈಡ್ ಶೋ, ಕಲಾವಿದರ ಕುರಿತಾದ ಸಾಕ್ಷ್ಯಚಿತ್ರಗಳನ್ನು ತೋರಿಸಿ ಹೊರಗಿನ ಪರಿಪೂರ್ಣ ಜ್ಞಾನ ಕೊಡುತ್ತ ಬರುತ್ತಿದ್ದರು. ಅದರ ಜೊತೆಗೆ ಬೇರೆ ಬೇರೆ ಕಾರ್ಯಕ್ರಮಗಳನ್ನು ಮಾಡುವುದರ ಮೂಲಕ ವಿದ್ಯಾರ್ಥಿಗಳಲ್ಲಿ ನವ ಚೈತನ್ಯವನ್ನು ತುಂಬಿ ವಿದ್ಯಾರ್ಥಿಗಳನ್ನು ಮಾನಸಿಕವಾಗಿ ಮತ್ತು ದೈಹಿಕವಾಗಿ ಪರಿಪೂರ್ಣರನ್ನಾಗಿ ಮಾಡುತ್ತಿದ್ದರು. ಅವರ ಸ್ಫೂರ್ತಿ, ಪ್ರೇರಣೆಯಿಂದಾಗಿ ಐಡಿಯಲ್ ಫೈನ್ ಆರ್ಟ್ ಸಂಸ್ಥೆಯಿಂದ ಕಲಿತಂತಹ ವಿದ್ಯಾರ್ಥಿಗಳು ಇಂದು ಕಲಾವಿದರಾಗಿ ರೂಪಗೊಳ್ಳುವುದಕ್ಕೆ ಕಾರಣರಾಗಿದ್ದಾರೆ ಎನ್ನಬಹುದು.

ಕಲೆ ಎನ್ನುವುದು ಸೀಮಿತವಾಗಿದ್ದ ಸಂದರ್ಭದಲ್ಲಿ, ಬ್ರಿಟೀಷರು ಭಾರತಕ್ಕೆ ಬಂದು ಬಾಂಬೆ, ಮದ್ರಾಸ್, ಕೊಲ್ಕತ್ತಾದಲ್ಲಿ ಕಲಾಶಾಲೆ ಪ್ರಾರಂಭ ಮಾಡಿದರು. ಆ ದಿನಗಳಲ್ಲಿ ಗುಲಬರ್ಗಾ ಪ್ರದೇಶ ತೀರಾ ಹಿಂದುಳಿದ ಪ್ರದೇಶವಾಗಿತ್ತು. ಇದು ನಿಜಾಮರ ಆಡಳಿತದಲ್ಲಿ ದೃಶ್ಯಕಲೆ ಅಂದರೆ ಏನು? ಹೇಗೆ ಇರುತ್ತದೆ? ಎನ್ನುವ ಕಲ್ಪನೆಯೂ ಇರದ ಸಂದರ್ಭದಲ್ಲಿ ಅಂದಾನಿಯವರು ರಾಷ್ಟ್ರ ಹಾಗೂ ಅಂತರಾಷ್ಟ್ರೀಯ ಮಟ್ಟದ ಕಲಾ ಚಟುವಟಿಕೆಗಳನ್ನು ಹಮ್ಮಿಕೊಳ್ಳುವುದರ ಮೂಲಕ ತಮ್ಮ ಕಲಾಶಾಲೆಯನ್ನು ರಾಷ್ಟ್ರ ಮತ್ತು ಅಂತರಾಷ್ಟ್ರೀ ಮಟ್ಟಕ್ಕೆ ಬೆಳೆಸಿದರು. ಇಂದು ಅಂತಾರಾಷ್ಟ್ರೀಯ ಮಟ್ಟದಲ್ಲಿ ಗುರ್ತಿಸಿಕೊಂಡಿದೆ.

ಮೊದಲು ಐಡಿಯಲ್ ಫೈನ್ ಆರ್ಟ್‌ನಲ್ಲಿ ಚಿತ್ರಕಲೆಯನ್ನು ಡಿಪ್ಲೊಮಾದ ಒಂದು ವಿಷಯವಾಗಿ ಬೋಧಿಸಲಾಗುತಿತ್ತು. ನಂತರ ೧೯೮೪-೮೫ ರಲ್ಲಿ ಎಮ್.ಎಮ್.ಕೆ ಕಾಲೇಜ್ ಆಫ್ ವಿಜುವೆಲ್ ಆರ್ಟ್ ಸ್ಥಾಪಿಸಿ, ಗುಲಬರ್ಗಾ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದು ಚಿತ್ರಕಲೆ, ಅಪ್ಲೈಡ್ ಬಿ.ಎಫ್.ಎ

ಮತ್ತು ಸ್ನಾತಕೋತ್ತರ ಪದವಿಯ ಶಿಕ್ಷಣವನ್ನು ನೀಡಲಾರಂಭಿಸಿತು. ಸದ್ಯದಲ್ಲಿ ಬಿ.ವಿ.ಎ, ಎಂ.ವಿ.ಎ, ಯಾಗಿದೆ. ಅಂದಿನಿಂದ ಅಂದಾನಿಯವರು ಪರಿಣಿತ ಉಪನ್ಯಾಸಕರನ್ನು ಕರೆಸಿ ಒಳ್ಳೆಯ ಶಿಕ್ಷಣ ಕೊಡಿಸುವ ಕೆಲಸ ಮಾಡಿದರು. ಅತ್ಯುನ್ನತವಾದ ಕಲಾಚಟುವಟಿಕೆಗಳ ಮೂಲಕ ಅಂದಾನಿಯವರು ಕಾಲೇಜಿನ ಸುತ್ತಮುತ್ತಲಿನ ಪರಿಸರದಲ್ಲಿ ಒಳ್ಳೆಯ ಹೆಸರು ಪಡೆಯಿತು.

ಅಂದಾನಿಯವರು ಮದ್ರಾಸ್, ಹೈದ್ರಾಬಾದ್, ಬಾಂಬೆ, ಕೊಲ್ಕತಾ. ಡೆಲ್ಲಿ ಮುಂತಾದ ಕಡೆಗಳಿಗೆ ಪ್ರವಾಸ ಹೋಗುತ್ತಿದ್ದರು. ಬರುವಾಗ ಅಲ್ಲಿನ ಕಲಾವಿದರ ಕಲಾಕೃತಿಗಳ ಕ್ಯಾಟ್‌ಲಾಗ್‌ಗಳು ಮತ್ತು ಕಲಾಪುಸ್ತಕಗಳನ್ನು ತಂದು ವಿದ್ಯಾರ್ಥಿಗಳಿಗೆ ಹಂಚುವ ಮೂಲಕ ಅವರಲ್ಲಿ ಸ್ಪರ್ಧಾತ್ಮಕ ಮನೋಭಾವನೆಯನ್ನು ಮೂಡಿಸುತ್ತಿದ್ದರು. ಆಧುನಿಕತೆಯ ಎಲ್ಲ ಆಯಾಮಗಳನ್ನು ವಿದ್ಯಾರ್ಥಿಗಳಿಗೆ ಪರಿಚಯಿಸುತ್ತಿದ್ದರು. "ಅಂದಾನಿಯವರು ಕಲಾಶಿಕ್ಷಣ ಮುಗಿದ ವಿದ್ಯಾರ್ಥಿಗಳನ್ನು ಸರ್ಟಿಫಿಕೆಟ್ ಕೊಟ್ಟು ಮನೆಗೆ ಕಳಿಸುತ್ತಾ ಇರಲಿಲ್ಲ. ಬದಲಾಗಿ ಶಿಕ್ಷಣ ಮುಗಿದ ಮೇಲೆ ನೀವು ಇಲ್ಲಿ ಇರಬಾರದು. ಶಾಂತಿನಿಕೇತನಕ್ಕೆ ಹೋಗಿ, ಬರೋಡಾ, ದೆಹಲಿ, ಬಾಂಬೆಗೆ ಹೋಗಿ. ಇಲ್ಲವೇ ಉನ್ನತ ಶಿಕ್ಷಣ ಪಡೆಯಿರಿ ಎಂದು ಹುರಿದುಂಬಿಸುತ್ತಿದ್ದರು".[೩೪] ವಿದ್ಯಾರ್ಥಿಗಳು ಬೇರೆ ಬೇರೆ ಕಡೆಗೆ ಹೊಗುವುದರಿಂದ ಅಲ್ಲಿ ನಡೆಯುವ ಕಲಾ ಕೆಲಸಗಳು ಮತ್ತು ಪ್ರದೇಶದ ಪರಿಚಯವಾಗುತ್ತದೆ ಎಂಬ ದೂರದೃಷ್ಟಿತ್ವ ಅಂದಾನಿಯವರಲ್ಲಿತ್ತು. ಇದರ ಜೊತೆಗೆ ಹೃದಯವಂತರಾದ ಅಂದಾನಿಯವರು ಹಲವು ಬಡ ವಿದ್ಯಾರ್ಥಿಗಳಿಗೆ ಆರ್ಥಿಕವಾಗಿಯೂ ಸಹಾಯ ಮಾಡುತ್ತಿದ್ದರು.

### ೧.೬. ಅಂದಾನಿಯವರ ಚಿತ್ರರಚನೆಗೆ ಆಕರ್ಷಣೆ

ಅಂದಾನಿಯವರು ಬಿ.ಎ ಓದುತಿರುವಾಗ ಗುಲಬರ್ಗಾದಲ್ಲಿ ದಿಲ್ಲಿವಾಲಾನ ಮಿಠಾಯಿ ಅಂಗಡಿ ಇತ್ತು. ಈ ಅಂಗಡಿಯಲ್ಲಿ ದಪ್ಪನ ಕಾಯದ ಮಹಿಳೆ ಮಾರಾಟ ಮಾಡಲು ಅಂಗಡಿಯಲ್ಲಿ ಕುಳಿತುಕೊಳ್ಳುತ್ತಿದ್ದಳು. ಅವಳು ತುಂಬಾ ವಿಸ್ತೀರ್ಣವುಳ್ಳ ಸ್ಥೂಲಕಾಯದ ಶರೀರವನ್ನು ಹೊಂದಿದ್ದಳು. ಅವಳಿಗೆ ಮೈಯಲ್ಲಿ ತುರಿಕೆಯಾದ ಸಂದರ್ಭದಲ್ಲಿ ಅವಳಿಗೆ ತನ್ನ ಕೈಗಳಿಂದ ಬೆನ್ನು ತೂರಿಸಿಕೊಳ್ಳಲು ಸಾಧ್ಯವಾಗದೇ ಇರುವಾಗ ಕಟ್ಟಿಗೆಯಿಂದ ತನ್ನ ಮೈಯನ್ನು ತೂರಿಸಿಕೊಳ್ಳುತಿದ್ದಳು. ಇದನ್ನು ಕಂಡ ಅಂದಾನಿಯವರಿಗೆ ಆಕೆಯ ಗುಣಲಕ್ಷಣಗಳು ತುಂಬಾ ಆಕರ್ಷಣೆಯಾಯಿತು. ಅವಳ ವರ್ತನೆಗಳು ನೋಡಲು ಸೂಕ್ಷ್ಮತೆಯಿಂದ ಕೂಡಿದ್ದವು ಮತ್ತು ನೋಡಲು ಸುಂದರವಾಗಿ ಕಾಣುತ್ತಿದ್ದಳು. ಆಕೆಯ ನೋಡಿದ ಮೇಲೆ ಸ್ಥೂಲಕಾಯದ ಮಹಿಳೆಯ ಚಿತ್ರ ಮಾಡಬೇಕೆಂದು ಆಗಲೇ ಸ್ಥೂಲಕಾಯದ ಚಿತ್ರವನ್ನು ಪ್ರಾರಂಭಿಸಿದರು. ಈ ಮೊದಲು ಆಸ್ಟ್ರೇಲಿಯಾ ಕಲಾವಿದನ ಚಿತ್ರಿಸಿದ 'ಫ್ಯಾಟ್ ವುಮೆನ್' ಚಿತ್ರವನ್ನು ಪತ್ರಿಕೆಗಳಲ್ಲಿ ಪ್ರಕಟವಾಗಿದ್ದನ್ನು ನೋಡಿದ್ದರು. ಇಂತಹ ವಿಷಯ ತೆಗೆದುಕೊಂಡು ಚಿತ್ರ ರಚನೆ ಮಾಡಬೇಕೆಂದು ಅವರು ಆಗಲೇ ನಿರ್ಣಯಯಸಿದ್ದರು. ಮಿಠಾಯಿ ಅಂಗಡಿಯಲ್ಲಿ ಆ ಮಹಿಳೆಯನ್ನು ನೋಡಿದ ಮೇಲೆ ಅದು ಅವರಲ್ಲಿ ಚಿತ್ರರಚನೆಗೆ ಪೂರಕವಾಯಿತು. ಆ ಸಂದರ್ಭದಲ್ಲಿ ದಪ್ಪನ ಕಾಯದ ಮಹಿಳೆಯ ಚಿತ್ರಗಳನ್ನು ಸರಣಿಯ ರೂಪದಲ್ಲಿ ಸುಮಾರು ಐವತ್ತಕ್ಕಿಂತಲೂ ಹೆಚ್ಚು

ಚಿತ್ರಗಳನ್ನು ರಚಿಸಿದ್ದಾರೆ. ಇವುಗಳನ್ನು ಪೂನಾ, ಬೆಂಗಳೂರು ಸಿ.ಕೆ.ಪಿ.ಯಲ್ಲಿ ಪ್ರದರ್ಶನ ಮಾಡಿದ್ದರು. ಅಲ್ಲಿ ಈ ಚಿತ್ರಗಳು ನೂರು ರೂಪಾಯಿಗೆ ಕೆಲವು ಕಲಾಕೃತಿಗಳು ಮಾರಾಟವಾಗಿದ್ದವು. ಇವುಗಳನ್ನು ಕ್ಯಾಮಲ್ ಕಂಪನಿಯ ಮಾರ್ಕರ್ ಮತ್ತು ಜಲವರ್ಣದಿಂದ ಹ್ಯಾಂಡಮೇಡ್ ಪೇಪರಿನಲ್ಲಿ ರಚಿಸಿದ್ದಾರೆ.

ಅದೇ ರೀತಿಯಾಗಿ ಅಂದಾನಿಯವರು ಗುರುರಾಜ ಭಟ್ ಎಂಬುವವರು ದೆಹಲಿಯ ಜ್ಞಾನಪೀಠ ಸಂಸ್ಥೆ ವತಿಯಿಂದ ಒಂದು ಸಲ ಗುಲಬರ್ಗಾಕ್ಕೆ ಬಂದಿದ್ದರು. ಅವರು ಇಲ್ಲಿನ (ಗುಲಬರ್ಗಾ) ಇತಿಹಾಸಕ್ಕೆ ಸಂಬಂದಿಸಿದ ಕೋಟೆ, ಕೊತ್ತಲು, ದೇವಾಲಯ ಮುಂತಾದ ಸ್ಮಾರಕಗಳನ್ನು ಕುರಿತು ಅಧ್ಯಯನ ಮಾಡಲು ಬಂದಿದ್ದರು ಅವರಿಗೆ ಇಲ್ಲಿನ ಪ್ರದೇಶದ ಪರಿಚಯ ವಿರಲಿಲ್ಲ. ಆಗ ಅವರ ಜೊತೆ ಸ್ಥಳೀಯರಾಗಿ ಅಂದಾನಿಯವರು ಕ್ಷೇತ್ರಕಾರ್ಯದಲ್ಲಿ ಗುರುರಾಜ ಭಟ್ ಅವರೊಂದಿಗೆ ತೆರಳಿದ್ದರು. ಆ ಸಂದರ್ಭದಲ್ಲಿ ಚಿತ್ರಕಲೆಯ ಮೂಲಕ ಈ ಪ್ರದೇಶದ ಚರಿತ್ರೆಯನ್ನು ತಿಳಿಸುವ ಶಾಸನಗಳು ವೀರಗಲ್ಲು, ಮಾಸ್ತಿಗಲ್ಲು, ಕೋಟೆ, ದೇವಾಲಯ ಮುಂತಾದವುಗಳನ್ನು ಕಂಡು ಚಿತ್ರಸಬೇಕೆಂದು ಮನಸ್ಸಿನಲ್ಲಿ ಬೇರೂರಿತ್ತು. ಗುಲಬರ್ಗಾದಲ್ಲಿ ಬಿಸಿಲು ಜಾಸ್ತಿ ಇರುವುದರಿಂದ ಬಿಸಲಿನಲ್ಲಿ ಏನೋ ನೋಡಿದರೆ ಮಾತ್ರ ಎರಡೆ ವರ್ಣಗಳು ಕಾಣುತ್ತಿದ್ದವು. ಒಂದು ಬಿಳಿ ಇನ್ನೊಂದು ಹಳದಿ. ಹೀಗಾಗಿ ಹಳೆಯ ಕಾಲದ ವಸ್ತುಗಳು, ಶಿಲಾ ಶಾಸನಗಳು, ಹುಡೆಗಳು, ಹಳೆ ಬಾವಿ, ಕೋಟೆ, ಕೋತ್ತಲಗಳು ಅಂತಹ ಆಕಾರಗಳನ್ನು ಕಂಡು ಅಂದಾನಿಯವರಿಗೆ ತುಂಬಾ ಇಷ್ಟವಾಗುತ್ತಿದ್ದವು. ಅವುಗಳನ್ನು ಗುರುರಾಜ.ಭಟ್ ಅವರ ಜೊತೆ ಹೋದಂತ ಸಂದರ್ಭದಲ್ಲಿ ರೇಖಾಚಿತ್ರಗಳನ್ನು ಮಾಡಿಕೊಂಡು ಬಂದಿರುವುದನ್ನು ಅಂದಾನಿಯವರೆ ಹೇಳುತ್ತಾರೆ. ಹಳೆಯ ಕಾಲದ ಐತಿಹಾಸಿಕ ಸ್ಮಾರಕಗಳನ್ನು, ಶಾಸನಗಳನ್ನು ಕಂಡು ವೈಭವ ಸರಣಿ ಚಿತ್ರ ಮಾಡಿದರು. ಆ ಸಂದರ್ಭದಲ್ಲಿ ಚಿತ್ರ ರಚನೆಗೆ ಬೇಕಾಗುವ ಸಾಮಾಗ್ರಿಗಳು ಗುಲಬರ್ಗಾದಲ್ಲಿ ಸಿಗುತಿರಲ್ಲಿಲ್ಲ. ಹಾಗಾಗಿ ಸಾದಾ ಪೇಪರಿನಲ್ಲಿ ಕಲಾಕೃತಿಯನ್ನು ಮಾಡುತ್ತಿದ್ದರು. ಅವು ಬಾಳಿಕೆ ಬರುತ್ತಾ ಇರಲಿಲ್ಲ. ಬೇಗನೆ ಹಾಳಾಗುತ್ತಿದ್ದವು. ಹೀಗಾಗಿ ಬಹಳಷ್ಟು ಕಲಾಕೃತಿಗಳು ಹೀಗೆ ಆಗಿವೆ ಎಂದು ಹೇಳುತ್ತಾರೆ.

ಅಂದಾನಿಯವರು ದೊಡ್ಡ ದೊಡ್ಡ ಗಾತ್ರದ ನಾಲ್ಕು ಐದು ಅಡಿ ದೊಡ್ಡ ಚಿಕ್ಕ ಅಳತೆಯಲ್ಲಿ ಸುಮಾರು ಮೂವತ್ತಕ್ಕಿಂತಲೂ ಹೆಚ್ಚು ವೈಭವ ಸರಣಿಯ ಚಿತ್ರಗಳನ್ನು ರಚಿಸಿದ್ದಾರೆ. “ಈ ಚಿತ್ರಗಳನ್ನು ಅಂದಾನಿಯವರು ಮತ್ತು ವಿಜಯ ಸಿಂದೂರ ಅವರ ಕೂಡಿಕೊಂಡು ದೆಹಲಿಯಲ್ಲಿ ೧೯೮೮ರಲ್ಲಿ ಕಲಾಪ್ರದರ್ಶನ ಮಾಡಿದರು. ಅಲ್ಲಿ ಅಂದಾನಿಯವರ ಒಂದು ಕಲಾಕೃತಿ ಒಂಬತ್ತು ಸಾವಿರ ರೂಪಾಯಿಗಳಿಗೆ ಮಾರಾಟವಾಗಿತ್ತು”.[೩೫] ಇವರ ಕಲಾಕೃತಿಗೆ ಒಳ್ಳೆಯ ಅಭಿಪ್ರಾಯ ಬಂದಿರುವ ಆಗಿನ ಸಂದರ್ಭವನ್ನು ನೆನಪಿಸಿಕೊಳ್ಳುತ್ತಾರೆ. ಇವೆ ಕಲಾಕೃತಗಳಲ್ಲಿ ಒಂದಕ್ಕೆ ಕೇಂದ್ರ ಲಲಿತಕಲಾ ಅಕಾಡೆಮಿಯ ರಾಷ್ಟ್ರೀಯ ಕಲಾ ಪ್ರಶಸ್ತಿ. ಮತ್ತು ಹೈದರಾಬಾದ ಆರ್ಟ್ ಸೊಸಾಯಿಟಿ ಪ್ರಶಸ್ತಿ ಲಭಿಸಿತ್ತು.

ನಂತರದ ದಿನಗಳಲ್ಲಿ ಈ ವೈಭವ ಸರಣಿ ಚಿತ್ರಗಳನ್ನು ಮಿಶ್ರ ಮಾಧ್ಯಮದಲ್ಲಿ ನಾನಾ ಅಳತೆಯ ಕ್ಯಾನವಾಸಿನ ಮೇಲೆ ರಚಿಸಿದರು. ಈ ಕಲಾಕೃತಿ ರಚನೆ ಮಾಡಲು ಪ್ರಿಂಟಿಂಗ್ ಪ್ರೆಸ್‌ನಲ್ಲಿರುವ ತಂತ್ರಗಳು ವೈಭವ ಸರಣಿ ಕಲಾಕೃತಿ ರಚನೆಗೆ ತುಂಬಾ ಸಹಾಯಕವಾಗಿದೆ ಎಂದು ಅಂದಾನಿಯವರು ಹೇಳುತ್ತಾರೆ.

ಅಂದಾನಿಯವರು ಪ್ರಸ್ತುತ ಸಂದರ್ಭದಲ್ಲಿ ಗೂಳಿ ಸರಣಿಯ ಚಿತ್ರಗಳನ್ನು ಹೆಚ್ಚಾಗಿ ರಚಿಸುತ್ತಾ ಬರುತ್ತಿದ್ದಾರೆ. ಇವುಗಳನ್ನು ತೈಲವರ್ಣ, ಅಕ್ರಾಲಿಕ, ಜಲವರ್ಣ, ರೇಖಾಚಿತ್ರಗಳನ್ನು ರಚಿಸಿದ್ದಾರೆ. ಕೃಷಿ ಆಧಾರಿತ ಕುಟುಂಬದಿಂದ ಬಂದಿದ್ದರಿಂದ ಹಾಗೂ ಗೂಳಿಯ ಬಲಿಷ್ಟವಾದ ಮೈಕಟ್ಟು ಹೊಂದಿರುವುದು ಅವರಿಗೆ ಬಲು ಇಷ್ಟ. ಗೂಳಿ ಚಿತ್ರ ಬಿಡಿಸಲು ಪ್ರಭಾವ ಬೀರಿರುವದನ್ನು ಕಾಣಬಹುದು. ಸುಮಾರು ಮೂವತ್ತಕ್ಕಿಂತಲೂ ಹೆಚ್ಚು ಗೂಳಿಯ ಸರಣಿಯ ಚಿತ್ರಗಳನ್ನು ಮಾಡಿದ್ದಾರೆ. ಹಿಗೆ ಸಂದರ್ಭಕ್ಕೆ ತಕ್ಕಂತೆ ಸಾವಿರಾರು ಕಲಾಕೃತಗಳನ್ನು ರಚಿಸುತ್ತಾ ಬಂದಿದ್ದಾರೆ.

### ೧.೭. ಕೌಟುಂಬಿಕ ಜೀವನ

ಅಂದಾನಿಯುವರು ತಮ್ಮ ಸಹೋದರಿ ಚಂದಮ್ಮ ರೇವಣಸಿದ್ದ, ಇವರ ಮಗಳು ಶಾಂತಾಬಾಯಿಯವರನ್ನು ೨೭-೦೫-೧೯೬೭ರಂದು ಮದುವೆಯಾದರು. ೧೯೭೩ರಲ್ಲಿ ಗುಲಬರ್ಗಾ ಹೃದಯ ಭಾಗದ ಎನ್.ವ್ಹಿ ಲೇಔಟ್‌ನಲ್ಲಿ ಕಪ್ಪುಕಲ್ಲಿನ ಸುಂದರವಾದ ವಾಸ್ತು, ಭಿತ್ತಿಚಿತ್ರಗಳಿಂದ ಕೂಡಿದ್ದು ಮನೆ ನೀಳಾಂಗಳ ಮಡದಿ ಶ್ರೀಮತಿ ಶಾಂತಾಬಾಯಿ, ಮಕ್ಕಳು ಮತ್ತು ಮನೆಯ ಆಗುಹೋಗುಗಳನ್ನು ಜವಾಬ್ದಾರಿ ಹೊತ್ತವರು, ದಿ ಐಡಿಯಲ್ ಫೈನ್ ಆರ್ಟ್‌ನಲ್ಲಿ ಉಪನ್ಯಾಸಕರಾಗಿರುವ ಗೌತಮ, ಶ್ರೀಮತಿ ಶಿಲ್ಪಾ ಅವರು ವೈದ್ಯೆ ಮತ್ತು ಕಲಾವಿದೆಯಾಗಿದ್ದರೆ, ಗ್ರಂಥಪಾಲಕರಾಗಿ ದಿ ಐಡಿಯಲ್ ಫೈನ್ ಆರ್ಟ್‌ನಲ್ಲಿ ಕಾರ್ಯ ನಿರ್ವಹಿಸುತ್ತಿರುವ ಗೌರೀಶ ಇನೊಬ್ಬ ಮಗ. ಮೊಮ್ಮಗ 'ಆದರ್ಶ ಮತ್ತು ಆಕಾಶ' ವಂಶದ ಕುಡಿ ಇಷ್ಟು ಅಂದಾನಿಯವರ ಚಿಕ್ಕ-ಚೊಕ್ಕ ಕುಟುಂಬವಾಗಿವೆ.

**ಟಿಪ್ಪಣಿ**

೨೪. ಡಾ.ಮಲ್ಲಿಕಾರ್ಜುನ.ಸಿ. ಬಾಗೋಡಿ, :ನಾಡೋಜ ಡಾ.ಜೆ.ಎಸ್.ಖಂಡೇರಾವ, ಪುಟ.೨೫

೨೫. ಅದೇ ಪುಸ್ತಕ, ಪು.೨೭

೨೬. ವಿಜಯ ಹಾಗರಗುಂಡಗಿ ಜೊತೆ ಸಂದರ್ಶನ, ೧೬.೦೬.೨೦೧೪

೨೭. ವ್ಹಿಜಿ ಅಂದಾನಿಯರ ಜೊತೆ ಸಂದರ್ಶನ, ೨೨.೦೩.೨೦೧೪

೨೮. ವ್ಹಿ.ಜಿ. ಅಂದಾನಿಯವರ ಜೊತೆ ಸಂದರ್ಶನ, ೧೯.೦೧.೨೦೧೪

೨೯. ವ್ಹಿಜಿ. ಅಂದಾನಿಯವರ ಜೊತೆ ಸಂದರ್ಶನ, ೨೦.೦೬.೨೦೧೪

೩೦. ಭೀಮರಾವ್.ಪಿ.ಬುರಾನಪೂರ, :ಪ್ರಜಾವಾಣಿ, ಪು.iii ೧೯.೧೧.೨೦೦೯

೩೧. ಚಂದ್ರಹಾಸ.ವಾಯ್.ಜಾಲಿಹಾಳ ಜೊತೆ ಸಂದರ್ಶನ, ೨೧.೦೪.೨೦೧೪

೩೨. ಹಣಮಂತ.ಮಂತಟ್ಟಿಯವರ ಜೊತೆ ಸಂದರ್ಶನ, ೨೩.೦೪.೨೦೧೪

೩೩. ಚಂದ್ರಹಾಸ.ವಾಯ್.ಜಾಲಿಹಾಳ ಅವರ ಜೊತೆ ಸಂದರ್ಶನ, ೨೨.೦೪.೨೦೧೪

೩೪. ಚಂದ್ರಹಾಸ.ವಾಯ್.ಜಾಲಿಹಾಳ ಅವರ ಜೊತೆ ಸಂದರ್ಶನ, ೨೧.೦೪.೨೦೧೪

೩೫. ದಿನಮಾನ ಪತ್ರಿಕೆ, ದನಾಂಕ ೮.ಅಗಷ್ಟ ೧೯೮೧



## ಅಧ್ಯಾಯ – ೪

## ಕಲಾಕೃತಿಗಳ ವಿಂಗಡಣೆ ಮತ್ತು ವಿಶ್ಲೇಷಣೆ

೪.೧. ಸಂವಾದ ತೈಲವರ್ಣ ಸರಣಿ ಚಿತ್ರಗಳು

೪.೨. ಸಂವಾದ ಜಲವರ್ಣ ಸರಣಿ ಚಿತ್ರಗಳು

೪.೩. ಸಂವಾದ ಸರಣಿ ರೇಖಾ ಚಿತ್ರಗಳು

೪.೪. ನಿಸರ್ಗ ಸರಣಿ ಚಿತ್ರಗಳು

೪.೫. ಸ್ಥೂಲಕಾಯದ ಮಹಿಳೆಯ ಜಲವರ್ಣ ಚಿತ್ರಗಳು

೪.೬. ಸ್ಥೂಲಕಾಯದ ಮಹಿಳೆಯ ರೇಖಾ ಚಿತ್ರಗಳು

೪.೭. ವಸಂತ ಸರಣಿ ಚಿತ್ರಗಳು

೪.೮. ವೈಭವ ಸರಣಿ ಚಿತ್ರಗಳು

೪.೯. ಆಟದ ಸರಣಿ ಚಿತ್ರಗಳು

೪.೧೦. ಸಂಕೀರ್ಣ ಮಾಧ್ಯಮದ ಕಲಾಕೃತಿಗಳು

೪.೧೧. ಟೈಪಿಂಗ ಮಷಿನ್

೪.೧೨. ಭಿತ್ತಿ ಚಿತ್ರಗಳು

## ಅಧ್ಯಾಯ-೪

# ಕಲಾಕೃತಿಗಳ ವಿಂಗಡಣೆ ಮತ್ತು ವಿಶ್ಲೇಷಣೆ

### ಪೀಠಿಕೆ

ಚಿತ್ರಕಲೆಯಲ್ಲಿ ವಿವಿಧ ಬಗೆಯ ಕಲಾಪ್ರಕಾರಗಳನ್ನು ಕಾಣಬಹುದು. ಅವುಗಳಲ್ಲಿ ಜಲವರ್ಣ, ತೈಲವರ್ಣ, ಅಕ್ರಾಲಿಕ್, ಚಾರ್ಕೋಲ್, ಪೇಸ್ಟಲ್ ಮುಂತಾದ ಕಲಾಪ್ರಕಾರಗಳು ಮುಖ್ಯವಾಗಿವೆ. ಈ ಎಲ್ಲಾ ಮಾದರಿಗಳಲ್ಲಿ ವಿ.ಜಿ. ಅಂದಾನಿಯವರು ಚಿತ್ರಕಲೆಯನ್ನು ಅರಳಿಸಿರುವುದು ಗಮನಾರ್ಹ. ಅಂದಾನಿಯವರು ಹೊಸತನ್ನು ಮಾಡುವಲ್ಲಿ ನಿಷ್ಣಾತರು. ಹೊಸ ಹೊಸ ಪರಿಕಲ್ಪನೆಗಳನ್ನು ಚಿತ್ರಕಲೆಯಲ್ಲಿ ಹುಟ್ಟುಹಾಕುವ ಪ್ರಯತ್ನವನ್ನು ಮಾಡಿದವರು. ಇವರು ಚಿತ್ರಕಲೆಗಳ ಮೂಲಕ ನಮ್ಮಲ್ಲಿನ ಕಲಾಪ್ರಕಾರಗಳನ್ನು ಹೊರಜಗತ್ತಿಗೆ ಪರಿಚಯಿಸಿದವರಲ್ಲಿ ಪ್ರಮುಖರಾಗಿದ್ದಾರೆ. ಅಂದಾನಿಯವರು ಚಿತ್ರಕಲೆಯಲ್ಲಿ ನೈಸರ್ಗಿಕವಾಗಿ ವಾಸ್ತವದ ಚಿತ್ರಗಳನ್ನು ಬಿಡಿಸುವಲ್ಲಿ ಪ್ರಾವಿಣ್ಯತೆಯನ್ನು ಪಡೆದವರಾಗಿದ್ದಾರೆ. ಅಂದಾನಿಯವರು ರಚಿಸಿದ ಚಿತ್ರಕಲಾಕೃತಿಗಳನ್ನು ಮಾಧ್ಯಮ ಮತ್ತು ವಿಷಯಾನುಸಾರವಾಗಿ ಕೆಳಗಿನಂತೆ ವಿಂಗಡಿಸಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

### ತೈಲವರ್ಣ

ತೈಲಚಿತ್ರ ರಚನೆ ಪ್ರಾರಂಭವಾದುದು ಹದಿನೈದನೇ ಶತಮಾನದ ಪ್ರಾರಂಭದಲ್ಲಿ. ಆಗ ಕ್ಯಾನ್‌ವಾಸ್ ಬಟ್ಟೆಯ ಮೇಲೆ ಸುಣ್ಣ ಅಥವಾ ಪ್ಲಾಸ್ಟರ್ ಆಫ್ ಪ್ಯಾರೀಸನ್ನು ಲೇಪಿಸುತ್ತಿದ್ದರು. ಮೊಟ್ಟೆಯ ಬಿಳಿಯ ಭಾಗದೊಂದಿಗೆ ಬಣ್ಣವನ್ನು ಬೆರೆಸಿ ಕಲಾಕೃತಿಗಳನ್ನು ರಚಿಸುತ್ತಿದ್ದರು. ಇದನ್ನು ಟೆಂಪರಾ ಎಂದು ಕರೆಯುತ್ತಿದ್ದರು. ಇದರ ಮೇಲೆ ಮೇರುಗೆಣ್ಣೆಯನ್ನು ಲೇಪಿಸಿದರೆ ತೈಲಚಿತ್ರ ಸಿದ್ಧವಾಗುತ್ತಿತ್ತು. ೧೯ನೆಯ ಶತಮಾನದವರೆಗೂ ಚಿತ್ರವನ್ನು ಒಂದು ಬಣ್ಣದಲ್ಲಿ ರಚಿಸಿ ಅದರ ಮೇಲೆ ಪಾರದರ್ಶಕ ಹೊಳಪು ಕೊಡುವ ಬಣ್ಣವನ್ನು ಲೇಪಿಸುತ್ತಿದ್ದರು. ತೈಲಚಿತ್ರ ರಚನೆಯ ಪ್ರಾರಂಭದಲ್ಲಿ ವರ್ಣದ್ರವ್ಯದ ಪುಡಿಯನ್ನು ಅಮೃತ ಶಿಲೆಯ ಮೇಲೆ ಅರೆದು ಅದಕ್ಕೆ ಸ್ವಲ್ಪ ತೈಲವನ್ನು ಸೇರಿಸಿ, ಬೇಕಾದ ತೈಲವರ್ಣವನ್ನು ತಯಾರಿಸಿಕೊಳ್ಳುತ್ತಿದ್ದರು. ಈಗ ತೈಲವರ್ಣದ ಟ್ಯೂಬುಗಳಲ್ಲಿ ದೊರೆಯುತ್ತದೆ. ಬಣ್ಣವನ್ನು ತೆಳುಮಾಡಿಕೊಳ್ಳಲು ಟರ್ಪಂಟೈನ ಮತ್ತು ನಾಗರಸೆ ತೈಲವನ್ನು ಉಪಯೋಗಿಸುತ್ತಾರೆ.

"ತೈಲವರ್ಣ ಆರುವುದು ನಿಧಾನ, ಬೇಡವಾದ ವರ್ಣವನ್ನು ತೆಗೆದು, ಬೇರೆ ಬಣ್ಣವನ್ನು ಉಪಯೋಗಿಸಬಹುದು. ಕಲಾವಿದ ತನಗೆ ಬೇಕಾದ ರೀತಿಯಲ್ಲಿ ತೆಳುವಾಗಿ, ಪಾರದರ್ಶಕವಾಗಿ

ಇಲ್ಲವೇ ಮಂದವಾಗಿಯೂ ಉಪಯೋಗಿಸಬಹುದು. ತೈಲಚಿತ್ರಗಳು ಬಹಳ ಕಾಲದವರೆಗೂ ಇರುತ್ತದೆ. ತೈಲಚಿತ್ರಗಳ ಪರಿಚಯ ಭಾರತಕ್ಕೆ ಮಧ್ಯಯುಗದಿಂದಲೇ ಆದಂತೆ ಕಂಡುಬರುತ್ತದೆ. ಮೊಘಲರ ಕಾಲದಲ್ಲಿ ಬಂದ ವಿದೇಶಿ ಪ್ರವಾಸಿಗಳು ಅಲ್ಲಿಂದ ತಂದು ಚಿತ್ರಗಳಲ್ಲಿ ತೈಲಚಿತ್ರಗಳೂ ಇದ್ದಿರಬಹುದು. ನಂತರದ ಕಾಲದಲ್ಲಿ ಭಾರತದಲ್ಲಿ ವಿದೇಶಿ ಕಲಾವಿದರು ತೈಲವರ್ಣದಲ್ಲಿ ಚಿತ್ರಿಸಿರುವುದನ್ನು ಗೋವಾ ಮುಂತಾದ ಕಡೆಗಳಲ್ಲಿ ಕಾಣಬಹುದು. ಭಾರತೀಯ ಕಲಾವಿದರಲ್ಲಿ ರಾಜ ರವಿವರ್ಮನಿಂದ ತೈಲಚಿತ್ರ ರಚನೆ ವ್ಯಾಪಕವವಾಗಿ ಆರಂಭಗೊಂಡಿತೆಂದು ಹೇಳಬಹುದು".[೩೬]

ವ್ಹಿ.ಜಿ.ಅಂದಾನಿಯವರು ೬೦ರ ದಶಕದಿಂದ ಪ್ರಸ್ತುತ ದಶಕದವರೆಗೂ ತೈಲವರ್ಣದ ಕಲಾಕೃತಿಗಳ ರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ವಿಭಿನ್ನ ಶೈಲಿ ಹಾಗೂ ವಿಷಯಗಳಾಧಾರಿತ ಕಲಾಕೃತಿಗಳು ಸಾಮಾಜಿಕ ಹಿನ್ನೆಲೆಯಲ್ಲಿ ರಚಿತಗೊಂಡಿವೆ. ತೈಲವರ್ಣದಲ್ಲಿ ಅಂದಾನಿಯವರು ಆಧುನಿಕ ಸಂವೇದನೆಯ ಸಂಯೋಜನಾ ಕಲಾಕೃತಿಗಳೊಂದಿಗೆ ಗೂಳಿ ಮತ್ತು ಸಂವಾದ ಸರಣಿಯ ಚಿತ್ರಗಳು ಹೆಚ್ಚಿನ ಸಂಖ್ಯೆಯಲ್ಲಿ ರಚಿಸಿದ್ದಾರೆ. ಇತರ ಮಾಧ್ಯಮಗಳಿಂದ ತೈಲವರ್ಣದಲ್ಲಿ ಬಹುಸಂಖ್ಯೆಯ ಕಲಾಕೃತಿಗಳು ಸೃಷ್ಟಿಯಾಗಿದ್ದು, ಅಂದಾನಿಯವರ ಕಲಾಸೃಷ್ಟಿಯ ಹಲವು ಆಯಾಮಗಳನ್ನು ಹಾಗೂ ದೃಷ್ಟಿಕೋನಗಳನ್ನು ತೌಲನಿಕವಾಗಿ ಇಲ್ಲಿ ನೋಡಬಹುದಾಗಿದೆ. ಪ್ರತೀ ಕಲಾಕೃತಿಯ ರಚನೆಯ ಹಿನ್ನೆಲೆ ಮತ್ತು ದೃಷ್ಟಿಕೋನಗಳನ್ನು ಅಂದಾನಿಯವರು ಇಲ್ಲಿ ಹೇಳಿದ್ದಾರೆ. ಈ ಮುಖೇನ ಅವರ ಅಭಿಪ್ರಾಯಗಳೊಂದಿಗೆ ಕಲಾಕೃತಿಗಳನ್ನು ಚರ್ಚೆಯ ಮೂಲಕ ಸ್ಪಷ್ಟಪಡಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

## ೪.೧. ಸಂವಾದ

### ೧. ಒಗ್ಗಟಿನಲ್ಲಿ ಬಲ (ಸಂವಾದ)

ಈ ಚಿತ್ರವು ಹೆಣ್ಣಿನ ಆಕೃತಿಯ ಜೊತೆಯಲ್ಲಿ ಪ್ರಕೃತಿಯಲ್ಲಿ ಪ್ರಾಣಿಯನ್ನು ಒಳಗೊಂಡಿರುವುದನ್ನು ಕಾಣಬಹುದು. ಅಂದಾನಿಯವರು ಪರಿಸರಕ್ಕೂ ಮತ್ತು ಮಾನವನಿಗೂ ಇರುವ ಸಹಜ ಸಂಬಂಧವನ್ನು ಈ ಚಿತ್ರದ ಮೂಲಕ ನಿರೂಪಿಸುತ್ತಿದ್ದಾರೆ. ಇಂದಿನ ಆಧುನಿಕ ಸಂದರ್ಭದಲ್ಲಿ ಮನುಷ್ಯ ಹಾಗೂ ಪ್ರಕೃತಿ ನಡುವಣ ಸಂಬಂಧವೇ ಇಲ್ಲ ಎನ್ನುವಂತಿರುವುದನ್ನು ಗಮನಿಸಿದಾಗ ಮೇಲಿನ ಚಿತ್ರವು ಆ ಸಂದರ್ಭವನ್ನು ಈ ಚಿತ್ರದ ಮೂಲಕ ಪುನಃ ಕಟ್ಟಿಕೊಡುತ್ತಿದೆ. ಹೆಣ್ಣನ್ನು ಕೂಡ ಪ್ರಕೃತಿಗೆ ನಮ್ಮ ಸಮಾಜವು ಹೋಲಿಸಿದೆ. ಹೆಣ್ಣು ಇಂದಿನ ಸಂದರ್ಭದಲ್ಲಿ ಅಬಲೆಯಲ್ಲ ಎಂಬುದನ್ನು ಹುಲಿಯನ್ನು ಅವಳ ಮೇಲೆ ಕುಳಿತಿರುವ ಚಿತ್ರಣದ ಮೂಲಕ ಅವಳು ಸಬಲೆ ಎಂಬಂತಹ ರೂಪಕವನ್ನು ಈ ಚಿತ್ರ ನೀಡುತ್ತಿದೆ. ಒಟ್ಟಿನಲ್ಲಿ ಹೆಣ್ಣಿನ ತಾಳ್ಮೆ, ಸಹನಾಭೂತಿ ಬಿಂಬಿಸುವಲ್ಲಿ ಅವಳಿಗೂ ಸಹ ಕೋಪ, ರೋಷ, ಸ್ವಾಭಿಮಾನದ ಪ್ರತೀಕ ಎಂಬಂತೆ ಹುಲಿಯ ಚಿತ್ರಣ ಕಂಡುಬರುತ್ತಿದೆ. ಈ ರೀತಿ ಹುಲಿ, ಹೆಣ್ಣು, ಪರಿಸರ ಈ ಮೂರೂ ದಿಕ್ಕಿನಲ್ಲೂ ಮನುಷ್ಯ ಸಹಜ ಹೊಂದಾಣಿಕೆ, ಪ್ರೀತಿ, ವಿಶ್ವಾಸಗಳಿಂದಿರಬೇಕು ಎಂಬುದನ್ನು ಚಿತ್ರ ಬಲವಾಗಿ ತಿಳಿಸುತ್ತದೆ.

## ೨. ಆಯ್ಕೆ (ಸಂವಾದ)

ಒಬ್ಬ ಯುವಕನ ಮುಂದೆ ಸುಂದರವಾದ ಯುವತಿಯನ್ನು ಆಯ್ಕೆ ಮಾಡುವ ಸಂದರ್ಭದಲ್ಲಿ ಆಗುವ ಗೊಂದಲವನ್ನು ಸೂಚಿಸುವ ಚಿತ್ರ ಇದಾಗಿದೆ. ತೈಲವರ್ಣದಲ್ಲಿರುವ ಈ ಚಿತ್ರ ಪ್ರತಿಯೊಬ್ಬ ವ್ಯಕ್ತಿಯೂ ಸಹ ಯಾವುದೇ ವಸ್ತುವನ್ನು ಆಯ್ಕೆಮಾಡಿಕೊಳ್ಳುವ ಸಂದರ್ಭದಲ್ಲಿ ಸ್ಪಷ್ಟ ನಿರ್ಧಾರಕ್ಕೆ ಬರುವಾಗ ಆಗುವ ಮನಸ್ಸಿನ ಹೊಯ್ದಾಟವನ್ನು ಸೂಚಿಸುತ್ತದೆ. ಇಲ್ಲಿ ಸುಂದರವಾದ ಬೆಳ್ಳಗಿನ ಬಳುಕುವ ಯುವತಿಯು ತಲೆಯಲ್ಲಿ ಹೊಕ್ಕಾಗ ಪ್ರತಿಯೊಬ್ಬ ಮನುಷ್ಯನೂ ಆಲೋಚನೆ ಮಾಡುತ್ತಾನೆ. ಅದರಂತೆ ಇಲ್ಲಿ ಬೆಳ್ಳಗಿರುವುದೆಲ್ಲಾ ಹಾಲಲ್ಲ. ಅದನ್ನು ಅಳೆದು ತೂಗಿ ನೋಡಬೇಕು. ಹಂಸಕ್ಷೀರ ನ್ಯಾಯದಂತೆ ಬುದ್ಧಿಯನ್ನು ಬಳಸಿಕೊಳ್ಳಬೇಕು ಎಂಬ ಸಂದೇಶವಿದೆ. ಆದರೆ ಆಯ್ಕೆ ಗೊಂದಲದಿಂದ ಕೂಡಿರುವುದು ಕಂಡುಬರುತ್ತದೆ.

## ೩. ಪ್ರೇಮಿಗಳ ಮಧ್ಯೆ ಸಂಘರ್ಷ (ಸಂವಾದ)

೩/೩ ಅಡಿ ಅಳತೆಯ ಈ ಕಲಾಕೃತಿಯು ೧೯೯೩ ರಲ್ಲಿ ತೈಲವರ್ಣ ಮಾಧ್ಯಮದಿಂದ ರಚಿಸಲ್ಪಟ್ಟಿದೆ. ಇಬ್ಬರು ಮಹಿಳೆಯರ ಆಕೃತಿಗಳನ್ನು ಹೊಂದಿರುವ ಈ ಕೃತಿಯಲ್ಲಿ ಬಿಳಿ, ಹಳದಿ ಮತ್ತು ನೀಲಿಬಣ್ಣ ಹಿನ್ನೆಲೆಯನ್ನು ಹೊಂದಿದೆ. ಮುಖ್ಯ ಆಕೃತಿಗೆ ಪೂರಕವಾದ ವರ್ಣಬಳಕೆ ಮಾಡಲಾಗಿದ್ದು ವೈಯಕ್ತಿಕ ತಂತ್ರ ಶೈಲಿಯನ್ನು ಆಕೃತಿಗೆ ತಕ್ಕಂತೆ ಮೇಳೈಸಿದ್ದಾರೆ. ಸ್ಪಷ್ಟ ಮುಖದಲ್ಲಿ ಭಾವನೆಗಳನ್ನು ತುಂಬಿರುವಂತೆ ವರ್ಣ ಸಂಯೋಜನೆಯನ್ನು ಮಾಡಲಾಗಿದೆ.

ಈ ಚಿತ್ರದಲ್ಲಿ ಯುವತಿ ತನ್ನ ಮುಖವನ್ನು ಕೆಂಪು ಮಾಡಿಕೊಂಡು ಪ್ರೇಮಿಯ ಜೊತೆಗೆ ಮಾತಿನ ಚಕಮಕಿಯಲ್ಲಿ ತೊಡಗಿದಂತೆ ಕಾಣುತ್ತದೆ. ಯವ್ವನದ ಯುವತಿಯ ಮನಸ್ಸಿನ ಸಿಟ್ಟು, ಸಿಡುಕುಗಳನ್ನು ಇಲ್ಲಿ ತೋರಿಸಲಾಗಿದೆ. ಮುಖದಲ್ಲಿನ ಕೆಂಪು ಬಣ್ಣ ಅಪಾಯ, ಕೋಪ ಮುಂತಾದವುಗಳನ್ನು ಸೂಚಿಸಿದರೆ, ಹಳದಿ ಬಣ್ಣ ಆಕೆಯಲ್ಲಿನ ಬಯಕೆಯನ್ನು ಸೂಚಿಸುತ್ತದೆ. ಯುವತಿ ಏನೆಲ್ಲಾ ಬೈದರೂ ಕೊನೆಗೆ ಶಾಂತಳಾಗಿರುವುದು ಇಲ್ಲಿ ಕಂಡುಬರುತ್ತದೆ. ಯುವಕನು ಆಕೆಯ ಜೊತೆಗೆ ಅನೈತಿಕ ಸಂಬಂಧ ಹೊಂದಿರಬೇಕು. ಅವನ ದೃಷ್ಠಿಯಲ್ಲಿ ಹೆಣ್ಣು ಭೋಗದ ವಸ್ತುವಾಗಿದ್ದಾಳೆ. ಇಲ್ಲಿ ಇನ್ನೊಂದು ಬಗೆಯಲ್ಲಿ ಯೋಚಿಸಬಹುದು. ಅದೇನೆಂದರೆ, ಶಾಂತಮೂರ್ತಿಯಾದ ಯುವಕನು ತನ್ನ ಲೈಂಗಿಕ ಅಪೇಕ್ಷೆಯನ್ನು ಅವಳ ಮುಂದೆ ಪ್ರಸ್ತಾಪ ಮಾಡಿರಬೇಕು. ಆದರೆ ಅದನ್ನು ತಿರಸ್ಕರಿಸಿದ ಯುವತಿ ಕೆಂಡಾಮಂಡಲವಾಗಿರುವ ಸಾಧ್ಯತೆಗಳಿವೆ.

## ೪. ಕನಸು (ಸಂವಾದ)

ವರ್ತಮಾನ ಸಂದರ್ಭದಲ್ಲಿ ಅನೇಕ ಆಲೋಚನೆಗಳನ್ನು ಮಾಡಿದರೆ ಸಮಸ್ಯೆ ಬಗೆಹರಿಯದಿದ್ದಾಗ ಮತ್ತಷ್ಟು ಕನಸು ಕಾಣುವ ಪ್ರಯತ್ನಕ್ಕೆ ಕೈಹಾಕುವುದೇ ಹೆಚ್ಚು. ರಾತ್ರಿ ಮಲಗಿದಾಗ ಕನಸಿನ ರೂಪದಲ್ಲಿ ಸುಖಾಂತದ ಜೀವನ ನಡೆಸಿದಂತಾಗಿ, ಇಡೀ ಜಗತ್ತಿನ ಒಡೆಯ ನಾನೆಂದು ಭಾಸವಾಗಿರುತ್ತದೆ. ಅದು ಕೇವಲ ಕನಸಿನಲ್ಲಿ ವಿಹರಿಸುವುದಾಗಿರುತ್ತದೆ. ಆದರೆ ವಾಸ್ತವ ಸಂಗತಿ ಮಾತ್ರ ಶೂನ್ಯ. ಎದ್ದು

ನೋಡಿದಾಗ ನಮ್ಮ ಮುಂದೆ ಏನೂ ಇಲ್ಲ. ಕನಸು ಸಾಕಾರಗೊಳ್ಳಲು ಕಾರ್ಯ ಪ್ರವೃತ್ತರಾದಾಗ ಮಾತ್ರ ಸಾಧ್ಯ ಎಂಬ ಸಂದೇಶವನ್ನು ಅಂದಾನಿಯವರು ನೀಡಿರುವುದು ಗಮನಾರ್ಹವಾಗಿದೆ.

**೫. ಕಾಯಕದ ಆಲೋಚನೆ (ಸಂವಾದ)**

೩/೩ ಅಡಿ ಅಳತೆ ಹೊಂದಿರುವ ಈ ಕಲಾಕೃತಿಯು ತೈಲವರ್ಣ ಮಾಧ್ಯಮದಲ್ಲಿ ರಚನೆ ಮಾಡಿದ್ದಾರೆ. ಕಣ್ಣಿಗೆ ತಂಪನ್ನು ನೀಡುವಂತಹ ಮಿಶ್ರವರ್ಣದ ಬಳಕೆಯಿಂದಾಗಿ ಮುಖ್ಯ ಆಕೃತಿ ಮೆರಗು ತರುವಂತಿದೆ. ತಿಳಿ ಹಳದಿ ಕಂದು ಬಣ್ಣದ ಹಿನ್ನೆಲೆಯಲ್ಲಿ ಅಂದಾನಿಯವರು ತಮ್ಮ ವೈಯಕ್ತಿಕ ವರ್ಣ ಸಂಯೋಜನಾ ತಂತ್ರಗಳನ್ನು ಬಳಸಿರುವುದು ಕಂಡು ಬರುತ್ತದೆ.

ಈ ಚಿತ್ರವು ವ್ಯಕ್ತಿಯು ಆಲೋಚನೆಯಲ್ಲಿ ತೊಡಗಿರುವಂತೆ ಸೂಚಿಸುತ್ತದೆ. ಮನಸ್ಸಿನ ಮುಂದೆ ಅನೇಕ ಮಾರ್ಗಗಳಿರುವುದರಿಂದ ಯಾವುದು ಸರಿ, ಯಾವುದು ತಪ್ಪು ಎಂಬುದನ್ನು ಆಲೋಚಿಸುತ್ತಾ ಕುಳಿತಿರುವ ಚಿತ್ರ ಮಹತ್ವದ್ದಾಗಿದೆ. ಬಿಡುವಿಲ್ಲದ ಇಂದಿನ ದಿನಗಳಲ್ಲಿ ಆಲೋಚನೆ ಮಾಡುತ್ತಿರುವುದನ್ನು ಗಮನಿಸಿದರೆ ಅದು ಬಡತನ, ನಿರುದ್ಯೋಗ ಮುಂತಾದವನ್ನು ಸೂಚಿಸುತ್ತದೆ. ದಾರಿ ಕಾಣದ ಯುವಕ ಯಾವ ಆಯ್ಕೆಗಳನ್ನು ಮಾಡಿಕೊಳ್ಳಲಿ? ಎಂಬ ಗೊಂದಲದಲ್ಲಿರುವುದು ಈ ಚಿತ್ರದ ವಿಶೇಷತೆ. ಯಾವುದೇ ತೀರ್ಮಾನಕ್ಕೆ ಬರಲಾಗದೆ ಆಲೋಚನೆಯಲ್ಲಿ ಮಗ್ನನಾಗಿರುವುದು ಬೆಳವಣಿಗೆಯ ಸಂಕೇತವೂ ಆಗಿದೆ. ಹಾಗೆಂದು ಕನಸು ನನಸಾದೀತೆಂದು ಭಾವಿಸುವಂತಿಲ್ಲ. ಅದು ಕೇವಲ ಹಗಲುಗನಸಾಗಿರಬಹುದು. ಅಥವಾ ಆಲೋಚನಾ ಕ್ರಮವಾಗಿರಬಹುದು. ಒಟ್ಟಾರೆಯಾಗಿ ಈ ವ್ಯಕ್ತಿಯ ಜೀವನದಲ್ಲಿ ಕತ್ತಲೆ ಆವರಿಸಿರುವುದು ಕಂಡುಬರುತ್ತದೆ.

**೬. ಸಂವಾದ**

ಗುಲಬರ್ಗಾ ಬಿಸಿಲಿನ ತಾಪಮಾನವನ್ನು ಹೆಚ್ಚು ಹೊಂದಿರುವ ಜಿಲ್ಲೆಯಾಗಿದೆ. ಇಂತಹ ಸುಡುಬಿಸಿಲಿನಲ್ಲಿ ಮಹಿಳೆಯರು ನೆರಳನ್ನು ಆಶ್ರಯಿಸುವತ್ತ ನಡೆದಿರುವ, ನಿಂತಿರುವ ಚಿತ್ರ ಇದಾಗಿದೆ. ಹಾಗೆಯೇ ನಿಂತಿರುವ ಮಹಿಳೆಯರು ಪರಸ್ಪರ ಚರ್ಚೆಯಲ್ಲಿ ತೊಡಗಿರುವುದನ್ನು ಗಮನಿಸಬಹುದಾಗಿದೆ. ಈ ಪ್ರದೇಶದ ಬಿಸಿಲನ್ನು ಅನುಭವಿಸಿದ ಜನರು ನಿಲ್ಲಲೂ ಆಗದೇ, ಇಲ್ಲಿ ಬಿಸಿಲನ್ನು ದೃಶ್ಯದ ಮೂಲಕ ಸಾಂಕೇತಿಕವಾಗಿ ಅನಾವರಣಗೊಳಿಸಿದ್ದು ಈ ಚಿತ್ರದಲ್ಲಿದೆ.

**೭. ಸಂವಾದ**

ಈ ಕಲಾಕೃತಿಯು ಕ್ಯಾನ್‌ವಾಸ್ ಮೇಲೆ ತೈಲವರ್ಣ ಮಾಧ್ಯಮದಲ್ಲಿ ರಚಿಸಲಾಗಿದೆ. ಹಳದಿ ಮತ್ತು ಕಂದು ಮಿಶ್ರಿತ ವರ್ಣಗಳ ಹಿನ್ನೆಲೆಯನ್ನು ಹೊಂದಿದ್ದು, ಇಬ್ಬರು ಮಹಿಳೆಯರು ಸಂಭಾಷಣೆಯಲ್ಲಿ ನಿರತರಾಗಿರುವಂತೆ ತೋರುತ್ತದೆ. ಮತ್ತೊಂದು ಬದಿಯಲ್ಲಿ ಮಹಿಳೆ ಆಕಾಶದಲ್ಲಿ ಕಂಡುಬರುತ್ತಿರುವಂತೆ, ಕೆಳಭಾಗದಲ್ಲಿ ಪಶುವಿನ ಆಕೃತಿಯೊಂದಿಗೆ ಸಂಯೋಜನೆ ಮಾಡಲಾಗಿದೆ. ಹಿತಮಿತವಾದ ವರ್ಣಬಳಕೆಯಿಂದ ಕಲಾಕೃತಿಗೆ ಮೆರಗು ನೀಡುತ್ತಿದೆ. ಇಲ್ಲಿನ ಆಕೃತಿಗಳನ್ನು ಗಮನಿಸಿದಾಗ ಯಾವುದೇ



೧. ಸಂವಾದ ತೈಲವರ್ಣ ಅಳತೆ: 3x3



2. ಆಯ್ಕೆ (ಸಂವಾದ) ತೈಲವರ್ಣ 2' x3



3. ಪ್ರೇಮಿಗಳ ಮಧ್ಯ ಸಂಘರ್ಷ (ಸಂವಾದ) ತೈಲವರ್ಣ 3x3



ಸಂವಾದ ತೈಲವರ್ಣ 2' x3



4. ಕನಸು (ಸಂವಾದ) ತೈಲವರ್ಣ 3x3



5. ಕಾಯಕದ ಆಲೋಚನೆ ತೈಲವರ್ಣ 3x3



6. ಸಂವಾದ ತೈಲವರ್ಣ 4x5



7. ಸಂವಾದ ತೈಲವರ್ಣ 4x5

ಆಕೃತಿಯೂ ಪ್ರಮಾಣ ಬದ್ದವಾಗಿಲ್ಲವಾದರೂ ಕೂಡ ಕಲಾವಿದರ ವೈಯಕ್ತಿಕ ಶೈಲಿಯ ಮೇಲೆ ಆಕೃತಿಗಳು ಮೂಡಿಬಂದಿವೆ.

## ೪.೨. ಸಂವಾದ ಜಲವರ್ಣ ಚಿತ್ರಗಳು

### ೧. ನಗರಗಳಲ್ಲಿ ಮಹಿಳೆಯರ ಸ್ಥಿತಿಗತಿ (ಸಂವಾದ)

ವರ್ತಮಾನದ ಸಂದರ್ಭದಲ್ಲಿ ಜಾಗತೀಕರಣದ ಹಿನ್ನೆಲೆಯಲ್ಲಿ ಸಣ್ಣ ಪುಟ್ಟ ಪಟ್ಟಣಗಳು ನಗರಗಳಾಗಿ ರೂಪುಗೊಳ್ಳುತ್ತಿವೆ. ಅತಿಯಾದ ಜನಸಾಂದ್ರತೆಯನ್ನು ಹೊಂದಿರುವ ನಗರಗಳಲ್ಲಿನ ಮಹಿಳೆಯರ ಸ್ಥಿತಿಗತಿಗಳನ್ನು ಈ ಚಿತ್ರ ಸೂಚಿಸುತ್ತದೆ. ಮಹಿಳೆಯರ ಕೊಲೆ, ಅತ್ಯಾಚಾರ, ಅವಮಾನ ಮುಂತಾದವುಗಳು ನಡೆಯುತ್ತಿರುವುದನ್ನು ಅಂದಾನಿಯವರು ತಮ್ಮ ಈ ಚಿತ್ರದಲ್ಲಿ ಸೆರೆಹಿಡಿದಿದ್ದು ಗಮನಾರ್ಹ. ಸಾಮಾಜಿಕ ವ್ಯವಸ್ಥೆಯ ಬಗೆಗಿನ ಅವರ ಚಿಂತನೆ ಸಂವೇದನಾಶೀಲವಾಗಿದೆ. ಮಹಿಳೆಯರನ್ನು ನಗರಗಳು ಬಲಿ ತೆಗೆದುಕೊಳ್ಳುತ್ತಿರುವುದನ್ನು ಚಿತ್ರಿಸಿರುವುದು ಅವರ ಸಾಮಾಜಿಕ ಕಳಕಳಿ ಒಂದು ಭಾಗವಾಗಿದೆ. ಹದಿಹರೆಯದ ಹುಡುಗಿಯರನ್ನು ಅತ್ಯಾಚಾರ, ಕೊಲೆ ಮಾಡಿ ಎಸೆದು ಹೋಗುವ ಮನಸ್ಥಿತಿಯನ್ನು ಈ ಚಿತ್ರ ತಿಳಿಸುತ್ತದೆ. ಅಲ್ಲದೇ ಹದಿಹರೆಯದ ಹೆಂಗಳೆಯರು ಜೀವನದಲ್ಲಿ ಸಾಕಷ್ಟು ಸಾಧನೆ ಮಾಡಬೇಕೆಂದು ಅನೇಕ ಕನಸುಗಳನ್ನು ಹೊಂದಿ, ಕಲ್ಪನಾ ಲೋಕದಲ್ಲಿ ವಿಹರಿಸುತ್ತಿರುವ ಅವರ ಕನಸಿನಂತೆ ನಗರಗಳು ರೂಪುಗೊಳ್ಳುತ್ತಿವೆ. ದುರಾಲೋಚನೆಗಳಿಂದ ಕೂಡಿದ ನಗರಗಳು ಹಣದ ವ್ಯಾಮೋಹಕ್ಕೆ ಸಿಲುಕಿರುವುದು ಕಂಡುಬರುತ್ತದೆ. ಸಂಪತ್ತಿನ ಕ್ರೋಢೀಕರಣದ ನಂತರ ಹುಟ್ಟಿಕೊಂಡ ದುರಾಲೋಚನೆಗಳು ಹದಿಹರೆಯದ ಹುಡುಗಿಯರನ್ನು ಬಲಿ ತೆಗೆದುಕೊಂಡಿರುವ ಸಂಗತಿಯನ್ನು ಈ ಚಿತ್ರದಲ್ಲಿ ಕಾಣಬಹುದು. ಈ ಕಲಾಕೃತಿಯು ೨೦೦೬ ರಲ್ಲಿ ಜಲವರ್ಣ ಮಾಧ್ಯಮದಿಂದ ರಚಿಸಲ್ಪಟ್ಟಿದೆ.

### ೨. ಭೂತಗನ್ನಡಿಯಲ್ಲಿ ಬಂಧನವಾದ ಮಹಿಳೆ (ಸಂವಾದ)

೨೦೦೨ರಲ್ಲಿ ರಚಿಸಲಾದ ಈ ಕಲಾಕೃತಿಯನ್ನು ಪೇಪರ್ ಮೇಲೆ ಜಲವರ್ಣದಿಂದ ರಚಿಸಲಾಗಿದೆ. ರೇಖಾ ಪ್ರಧಾನವಾದ ಈ ಚಿತ್ರದಲ್ಲಿ ಕಪ್ಪು ಮತ್ತು ಕಂದುಗೆಂಪು ವರ್ಣದ ಹಿನ್ನೆಲೆಯನ್ನು ಹೊಂದಿದೆ. ಮುಖ್ಯ ಆಕೃತಿಗೆ ಪೂರಕವಾಗುವಂತಹ ವರ್ಣಗಳನ್ನು ಇಲ್ಲಿ ಬಳಸಲಾಗಿದೆ.

ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ತಾಯಿಯ ಸ್ಥಾನಮಾನಗಳನ್ನು ನೀಡಿದ್ದರೂ, ಹೆಣ್ಣುತನದ ಹಿನ್ನೆಲೆಯಲ್ಲಿ ಭೋಗದ ವಸ್ತುವಾಗಿದ್ದಳು ಎಂಬುದನ್ನು ಈ ಚಿತ್ರದಲ್ಲಿ ಕಾಣಸಿಗಬಹುದು. ಒಂದು ಚೌಕಟ್ಟಿನಲ್ಲಿ ಸಿಲುಕಿಕೊಂಡ ಮಹಿಳೆ ಪುರುಷಪ್ರಧಾನ ವ್ಯವಸ್ಥೆಯನ್ನು ಹಿಂಬಾಲಿಸುತ್ತಾ ಬಂದಿರುವುದು ಕಂಡುಬರುತ್ತದೆ. ಪುರುಷನ ಬೆನ್ನ ಹಿಂದೆಯೇ ಸಾಗುತ್ತಾ ಬಂಧನಕ್ಕೊಳಗಾಗಬೇಕಾಗಿತ್ತು. ಆಧುನಿಕ ಕಾಲಘಟ್ಟದಲ್ಲಿಯೂ ಮಹಿಳೆ ಪುರುಷನನ್ನು ಅವಲಂಬಿಸಿದ್ದಾಳೆ ಎಂಬುದನ್ನು ಇದು ಸೂಚಿಸುತ್ತದೆ. ಮಹಿಳೆಯು ಸ್ವತಂತ್ರವಾಗಿರಬೇಕು ಎಂಬ ಸಂದೇಶವನ್ನು ಈ ಚಿತ್ರದಲ್ಲಿ ತೋರಿಸಲಾಗಿದೆ.

ಸಾಮಾಜಿಕ ವ್ಯವಸ್ಥೆ ಗೋಮುಖ ವ್ಯಾಘ್ರನಂತೆ ತನ್ನ ಪ್ರಭಾವವನ್ನು ಹಾಗೆಯೇ ಮುಂದುವರಿಸಿಕೊಂಡು ಬಂದಿರುವುದನ್ನು ಇಲ್ಲಿ ಕಾಣಬಹುದಾಗಿದೆ. ಪುರುಷಪ್ರಧಾನ ವ್ಯವಸ್ಥೆಯ ರೂಪಕವಾಗಿ ಈ ಚಿತ್ರ ಕಂಡುಬರುತ್ತದೆ.

**೩. ಸಂಪತ್ತಿನ ಗಂಟನ್ನು ಹಿಡಿದು ಮಂಡಿಯೂರಿ ಕುಳಿತಿರುವ ವ್ಯಕ್ತಿ**

ಈ ಚಿತ್ರದಲ್ಲಿ ಅಂದಾನಿಯವರ ಸಾಮಾಜಿಕ ಮತ್ತು ಆರ್ಥಿಕ ಪ್ರಜ್ಞೆಯನ್ನು ಕಾಣಬಹುದು. ಈ ಚಿತ್ರದಲ್ಲಿ ದೊಡ್ಡ ಪ್ರಮಾಣದಲ್ಲಿ ಬೆಳೆದು ನಿಂತಿರುವ ಬಂಡವಾಳಶಾಹಿಯ ಚಿತ್ರವಿದೆ. ಅವನಲ್ಲಿರುವ ಸಂಪತ್ತನ್ನು ನೋಡಿದ ಕೈಗಳು ಅವನನ್ನೇ ಅಪ್ಪಿಕೊಂಡಿರುವುದು ಕಂಡುಬರುತ್ತದೆ. ತನ್ನ ಬಂಡವಾಳಕ್ಕೆ ಕಾಣದ ಕೈಗಳು ಹಾತೊರೆಯುತ್ತಿರುವುದನ್ನು ಸೂಚಿಸುತ್ತದೆ. ಬಂಡವಾಳಶಾಹಿಗಳ ಬೆನ್ನತ್ತಿದವರು ಅವನ ಮುಂದೆ ತಲೆಬಾಗಬೇಕು. ಅವರೆಲ್ಲರನ್ನೂ ಒಂದೇ ಗಂಟಿನಲ್ಲಿ ಕಟ್ಟಿದಂತಿದೆ ಬಂಡವಾಳಶಾಹಿಗಳು ತಮಗೆ ಬೇಕಾದ್ದನ್ನು ಪಡೆಯಲು ಮಂಡಿಯೂರಿ ಕುಳಿತರೆ ಸಾಕು ಅದೆಷ್ಟೋ ಕಾಣದ ಕೈಗಳು ಅಪ್ಪಿಕೊಳ್ಳುತ್ತವೆ ಎಂಬುದು ಇದರಿಂದ ತಿಳಿದು ಬರುತ್ತದೆ. ೨೦೦೮ರಲ್ಲಿ ರಚಿಸಲಾದ ಈ ಕಲಾಕೃತಿಯನ್ನು ಪೇಪರ್ ಮೇಲೆ ಜಲವರ್ಣದಿಂದ ರಚಿಸಲಾಗಿದೆ.

**೪.೩ ಸಂವಾದ ಸರಣಿಯ ರೇಖಾ ಚಿತ್ರಗಳು**

**೧. ನೆರಳನ್ನು ಬಯಸಿ ಹೋಗುತ್ತಿರುವ ಮಹಿಳೆಯರು (ಸಂವಾದ)**

ಈ ಚಿತ್ರದಲ್ಲಿ ಗುಲಬರ್ಗಾ ಪ್ರದೇಶದ ಬಿಸಿಲಿನ ಹೆಚ್ಚಳವನ್ನು ಸೂಚಿಸುವಂತೆ ಚಿತ್ರಿಸಲಾಗಿದೆ. ಬಯಲು ಪ್ರದೇಶವಾಗಿರುವುದರಿಂದ ಗಿಡಮರಗಳು ಅಷ್ಟಕ್ಕಷ್ಟೇ. ಅಲ್ಲದೇ ಮಳೆಯ ಮೋಡಗಳು ಸಹ ಚಲಿಸುತ್ತಿರುವುದು ಕಂಡುಬರುತ್ತದೆ. ಅತಿಯಾದ ಬಿಸಿಲಿನ ತಾಪಮಾನದಿಂದ ಮಳೆ ಬಂದರೆ ತನ್ನ ಮಗುವಿಗೆ ತೊಂದರೆಯಾಗುತ್ತದೆ ಎಂದು ಒಬ್ಬ ಮಹಿಳೆ ಆಲೋಚಿಸಿದರೆ, ಮತ್ತಿಬ್ಬರು ಮುಂದೆ ಮುಂದೆ ಸಾಗುತ್ತಿರುವರು. ನೆರಳಿನಾಕಾರದ ಮೋಡಗಳು ಆಗಾಗ ಬಿಸಿಲಿನ ತಾಪಮಾನವನ್ನು ಕಡಿಮೆ ಮಾಡುತ್ತಿವೆ. ಇದಕ್ಕಾಗಿ ಇಲ್ಲಿ ಮನುಷ್ಯ ಮರದ ಬುಡದಲ್ಲಿ ಆಶ್ರಯ ಪಡೆದಿರುವುದನ್ನು ಮತ್ತು ಮಳೆ ಬರುವ ಸಾಧ್ಯತೆಗಳನ್ನು ಸೆರೆಹಿಡಿಯಲಾಗಿದೆ.

**೨. ಒಗ್ಗಟ್ಟಿನಲ್ಲಿ ಬಲ (ಸಂವಾದ)**

೨೦೦೯ರಲ್ಲಿ ಪೇಪರ್‌ನ ಅವಕಾಶದಲ್ಲಿ ಪೆನ್ಸಿಲ್ ಮಾಧ್ಯಮದಿಂದ ರಚಿಸಿರುವಂತಹ ಒಂದು ವಿಶಿಷ್ಟ ಸಂಯೋಜನಾ ರೇಖಾಚಿತ್ರ ಇದಾಗಿದೆ. ವಿಭಿನ್ನ ಮಾದರಿಯಲ್ಲಿ ಆಕೃತಿಗಳನ್ನು ಹೊಂದಿಸಿ ಮಾನವ ಪ್ರಕೃತಿಗೆ ದಾಸನಾಗಿರುವಂತೆ ತೋರ್ಪಡಿಸುವಂತಹ ಕೃತಿಯಾಗಿದೆ ಸರಳ ರೇಖೆಯನ್ನು ಹೊಂದಿರುವ ಈ ಕೃತಿಯು ವಿಭಿನ್ನ ಅರ್ಥಗಳನ್ನೂ ಸೂಚಿಸುತ್ತಿದೆ.

ಅಂದಾನಿಯವರು ಈ ಚಿತ್ರದ ಮೂಲಕ ಒಗ್ಗಟ್ಟಿನಲ್ಲಿ ಬಲವಿದೆ ಎಂಬುದನ್ನು ಸ್ಪಷ್ಟವಾಗಿ ದಾಖಲಿಸುತ್ತಾರೆ. ಎಲ್ಲರೂ ಒಂದಾಗಿದ್ದರೆ ಏನನ್ನಾದರೂ ಸಾಧಿಸಬಹುದು. ಎಂತಹ ಸಮಸ್ಯೆ ಬಂದರೂ



ನಗರಗಳಲ್ಲಿ ಮಹಿಳೆಯರ ಸ್ಥಿತಿಗತಿ, ಜಲವರ್ಣ 2006



ಸಂಪತ್ತಿನ ಗಂಟು ಜಲವರ್ಣ 2008



2. ಭೂತಗನ್ನಡಿಯಲ್ಲಿ ಬಂಧನವಾದ ಮಹಿಳೆ 2002

ಸುಲಭವಾಗಿ ಬಗೆಹರಿಸಬಹುದು. ಹೊಂದಾಣಿಕೆ ಬಹುಮುಖ್ಯ, ಎಲ್ಲರ ಕನಸುಗಳೂ ನನಸಾಗುತ್ತವೆ. ಒಗ್ಗಟ್ಟಿಗೆ ಅಂತಹ ಶಕ್ತಿಯಿದೆ. ಬೆಳವಣಿಗೆಗೆ ಇದು ಪೂರಕವಾಗುತ್ತದೆ. ಎಲ್ಲಾ ಕ್ಷೇತ್ರಗಳಲ್ಲಿಯೂ ಒಗ್ಗಟ್ಟಿನ ಪ್ರದರ್ಶನ ನಡೆಯಬೇಕು. ಆಗ ಸಮಾಜದ ಸುಧಾರಣೆ ಸಾಧ್ಯವಾಗುತ್ತದೆ. ರಾಜಾರೋಷವಾಗಿ ನಿರ್ಭಯವಾಗಿ ಜೀವಿಸುವ ಸಾಮರ್ಥ್ಯ ಬರುತ್ತದೆ. ಎಂಬುದು ಇದರ ತಿರುಳು.

## ೪.೪. ನಿಸರ್ಗ ಸರಣಿಯ ಚಿತ್ರಗಳು

### ೧ ಮನೆಯ ಮುಂದೆ ಗಿಡಮರಗಳನ್ನು ಬೆಳೆಸುವುದು.

ಈ ಚಿತ್ರದಲ್ಲಿ ರುಮಾಲೆ ಚನ್ನಬಸಯ್ಯನವರ ಪ್ರಭಾವವನ್ನು ಕಾಣಬಹುದಾಗಿದೆ. ಮನುಷ್ಯ ತನ್ನ ಸುತ್ತಮುತ್ತ ಉತ್ತಮ ಪರಿಸರವನ್ನು ರೂಪಿಸಿಕೊಳ್ಳಬೇಕೆಂಬುದನ್ನು ಇದರಿಂದ ಗುರುತಿಸಬಹುದು. ಮನೆಯ ಆವರಣದಲ್ಲಿ ವಿವಿಧ ಹೂಬಳ್ಳಿಗಳು ಹೂವಿನ ಗಿಡಗಳನ್ನು ಹಸಿರು, ಕೆಂಪು ಬಣ್ಣದ ಮೂಲಕ ರಚಿಸಲಾಗಿದೆ. ವಾಂಡದ ಗೋಡೆಗೆ ಬಿಳಿ ಬಣ್ಣವನ್ನು ಹಚ್ಚಲಾಗಿದೆ. ದೊಡ್ಡಮರವು ಬಿಳಿ, ಹಳದಿ, ಹಸಿರು ಬಣ್ಣಗಳಿಂದ ಗುರುತಿಸಿಕೊಂಡಿದೆ. ಈ ಮರವು ಬಳ್ಳಿಯಂತೆ ಬಾಗಿ ನಿಂತಿದೆ. ಮನೆಯ ಮುಂದಿನ ಅಂಗಳವನ್ನು ಕೆಂಪು ಮತ್ತು ಹಳದಿ ಬಣ್ಣಗಳಿಂದ ಸೂಚಿಸಿದ್ದಾರೆ. ಒಟ್ಟಾರೆಯಾಗಿ ತಮ್ಮ ಕಲೆಯ ಮೂಲಕ ಪ್ರಕೃತಿಯನ್ನು ಬೆಳೆಸಿ ಇನ್ನೊಬ್ಬರಿಗೆ ಮಾದರಿಯಾಗಿ ಮತ್ತು ನಾಡನ್ನು ಉಳಿಸಿ ಎಂಬ ಸಂದೇಶ ನೀಡಿದ್ದಾರೆ.

### ೨. ನೈಸರ್ಗಿಕ ಸಂಪತ್ತಿನ ನಾಶ

೬೦ರ ದಶಕಕ್ಕಿಂತ ಮೊದಲು ಬಹುತೇಕವಾಗಿ ಪ್ರಕೃತಿಯು ತನ್ನ ಸೌಂದರ್ಯವನ್ನು ಕಾಪಾಡಿಕೊಂಡು, ನೋಡುಗರನ್ನು ಬೆರಗುಗೊಳಿಸಿರುವುದನ್ನು ಕಾಣಬಹುದು. ಉತ್ತಮ ಮಳೆಯಿಂದಾಗಿ ಮರಗಿಡಗಳು ಹಚ್ಚಹಸುರಿನಿಂದ ಕೂಡಿದ್ದವು. ಅಂತಹ ಪರಿಸರದಲ್ಲಿ ಜನರು ಮನೆಗಳನ್ನು ಕಟ್ಟಿಕೊಂಡು ವಾಸಿಸುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಕೈಗಾರೀಕರಣದ ಪ್ರಭಾವದಿಂದಾಗಿ ಪ್ರಕೃತಿ ವಿಕೋಪದತ್ತ ಮುಖಮಾಡಿದೆ. ಬಿಸಿಲಿನ ಪ್ರಮಾಣ ಹೆಚ್ಚಾಗಿ ಪರಿಸರ ಹಾಳಾಗುತ್ತಿರುವುದನ್ನು ಇಲ್ಲಿ ಬಿಡಿಸಲಾಗಿದೆ. ಇಲ್ಲಿ ಹಳದಿ ಬಣ್ಣವು ಬಿಸಿಲನ್ನು ಸೂಚಿಸುತ್ತದೆ.

### ೩. ಹಂಪಿ ವಿರೂಪಾಕ್ಷ ದೇವಾಲಯದ ಶಿಖರ

೨/೨೧/೨ ಅಡಿ ಅಳತೆಯ ಈ ಕಲಾಕೃತಿಯು ಕ್ಯಾನ್‌ವಾಸ್ ಮೇಲೆ ತೈಲವರ್ಣ ಮಾಧ್ಯಮದಿಂದ ರಚಿಸರುವಂತಹದ್ದಾಗಿದೆ. ಶುಭ್ರ ನೀಲಿ ಆಕಾಶದ ಹಿನ್ನೆಲೆ ಹೊಂದಿರುವ ಹಂಪಿ ವಿರೂಪಾಕ್ಷ ದೇವಾಲಯದ ಮುಖ್ಯಗೋಪುರದ ಈ ಕಲಾಕೃತಿಯಲ್ಲಿ ಯಥಾದರ್ಶನವನ್ನು ಯಥಾವತ್ತಾಗಿ ಪಾಲಿಸಿರುವುದು ಇಲ್ಲಿ ಬಳಕೆಯಾಗಿರುವ ಬಣ್ಣ ಮತ್ತು ಆಕೃತಿಯಲ್ಲಿನ ಶಾಸ್ತ್ರಬದ್ಧ ವಿನ್ಯಾಸದಿಂದ ಕಂಡು ತಿಳಿಯಬಹುದು ಹಿನ್ನೆಲೆಯ ಶುಭ್ರ ಆಕಾಶ ಬೆಟ್ಟ ಗುಡ್ಡಗಳ ಸಾಲು ಮರಗಿಡಗಳು ಗೋಪುರದ ಸುತ್ತಲಿನ ಮಂಟಪಗಳು ಕಲಾವಿದರ ತೀಕ್ಷ್ಣ ದೃಷ್ಟಿಯಲ್ಲಿ ಪ್ರತಿಯೊಂದು ಎಣಿಕೆ ರೂಪದಲ್ಲಿ



1. ಮನೆಯ ಮುಂದೆ ಗಿಡಮರಗಳನ್ನು ಬೆಳೆಸುವುದು, ಜಲವರ್ಣ 1988



2. ನೈಸರ್ಗಿಕ ಸಂಪತ್ತಿನ ನಾಶ, ಜಲವರ್ಣ 1988



3. ಹಂಪಿ ವಿರೂಪಾಕ್ಷ ದೇವಾಲಯ ಶಿಖರ, ತೈಲವರ್ಣ 2.x.$^1/_2$



ಹಂಪಿ ಜಲವರ್ಣ



ನಿಸರ್ಗ ತೈಲವರ್ಣ 2008

ರಚಿಸಲಾಗುವಂತೆ ಈ ಕಲಾಕೃತಿ ಮೂಡಿಬಂದಿದೆ. ನೆರಳು ಬೆಳಕು ಕೂಡ ಅಷ್ಟೇ ಪ್ರಧಾನವಾಗಿ ಮೂಡಿಬಂದಿರುವುದನ್ನು ಕಾಣಬಹುದಾಗಿದೆ.

ಅಂದಾನಿಯವರು ಸುಕ್ಷೇತ್ರ, ವಿಜಯನಗರದ ರಾಜಧಾನಿಯಾದ ಹಂಪಿಗೆ ವಿದ್ಯಾರ್ಥಿಗಳನ್ನು ಕರೆದುಕೊಂಡು ಬಂದಿದ್ದರು. ಆ ಸಂದರ್ಭದಲ್ಲಿ ಗುಡಿಗೋಪುರಗಳನ್ನು ಚಿತ್ರಿಸುವ ರೀತಿ ತಿಳಿಸಿಕೊಡಲು ಈ ಚಿತ್ರ ಬಿಡಿಸಲಾಗಿದೆ. ಇದು ಅವರ ಆದ್ಯತೆಯ ವಿಷಯವಾಗಿದೆ. ಚರಿತ್ರೆಯ ಘಟನೆಯನ್ನು ಕಾಲಾಂತರದಲ್ಲಿ ಮೆಲುಕು ಹಾಕಲು ಇಂತಹ ಚಿತ್ರಕಲೆಯ ಅವಶ್ಯವನ್ನು ಅರಿತು ಚಿತ್ರಿಸಲಾಗಿದೆ. ಇದು ವಿಜಯನಗರದ ಗತವೈಭವವನ್ನು ಸಾರುವ ಸಂಕೇತವಾಗಿ ಕಂಡುಬರುತ್ತದೆ. ಮುಂದೆ ಈ ಗೋಪುರ ಬಿದ್ದುಹೋದ ನಂತರ ಈ ಚಿತ್ರಕಲೆಯ ಮೂಲಕ ಪೂರ್ಣ ಗೋಪುರವನ್ನು ನೋಡಬಹುದು. ಪ್ರಾಚೀನ ಅವಶೇಷಗಳು ನಶಿಸಿ ಹೋಗುವ ಮುನ್ನ ಅವುಗಳನ್ನು ದಾಖಲಿಸಬೇಕು ಎಂಬ ಪ್ರಜ್ಞೆಯನ್ನು ಅಂದಾನಿಯವರು ಹೊಂದಿದ್ದರು. ಅದರ ಸಂಕೇತವಾಗಿ ಈ ದೇವಾಲಯವು ಚಿತ್ರಣಗೊಂಡಿದೆ. ಅದು ಜಾತ್ರೆಯ ಸಂದರ್ಭದಲ್ಲಿ ಸಿದ್ಧಗೊಂಡಿರುವ ಪರಿಯನ್ನು ಕಾಣಬಹುದು. ಇಲ್ಲಿ ಗೋಪುರ, ಕರಿಕಲ್ಲಿನಲ್ಲಿ ಕೆತ್ತಿರುವ ಬಸವಣ್ಣ, ಈಶ್ವರ ಮುಂತಾದ ಚಿತ್ರಗಳ ಜೊತೆಗೆ ಅಲ್ಲಿನ ಗೋಡೆಗೆ ಬಳಿದಿರುವ ಬಣ್ಣ, ಕಂಬ, ಅಡ್ಡಗೋಡೆಗಳನ್ನು ಅಂದವಾಗಿ ಚಿತ್ರಿಸುತ್ತಾ ಅಲ್ಲಿನ ಪ್ರಕೃತಿ ಸೌಂದರ್ಯವನ್ನು ಸೂಚಿಸುವುದನ್ನು ಮರೆತಿಲ್ಲ. ದೊಡ್ಡ ದೊಡ್ಡ ಬೆಟ್ಟಗುಡ್ಡಗಳನ್ನು ಅಲ್ಲಿರುವ ಸಸ್ಯಸಂಪತ್ತನ್ನು ಮುಳ್ಳು, ಕಲ್ಲುಬಂಡೆಗಳನ್ನು ಬಿಡಿಸಿದ್ದಾರೆ. ಒಟ್ಟಾರೆ ಇಂತಹ ಚಾರಿತ್ರಿಕ ಪ್ರದೇಶಗಳ ಚಿತ್ರಗಳನ್ನು ಸೆರೆ ಹಿಡಿಯುವ ಅಗತ್ಯತೆಯನ್ನು ಅಂದಾನಿಯವರು ಎತ್ತಿಹಿಡಿದಿರುವುದು ಗಮನಾರ್ಹ.

### ೪.೫. ಸ್ಥೂಲ ಕಾಯದ ಮಹಿಳೆಯ ಜಲವರ್ಣ ಚಿತ್ರಗಳು

**ಪೀಠಿಕೆ**

ಚಿತ್ರಕಲೆಯಲ್ಲಿ ಬಹುತೇಕವಾಗಿ ಜಲವರ್ಣದ ಚಿತ್ರಕಲೆ ಹೆಚ್ಚಿನ ಪ್ರಾವಿಣ್ಯತೆ ಪಡೆದಿರುವುದನ್ನು ಗಮನಿಸಬಹುದಾಗಿದೆ. ಜಲವರ್ಣದ ಕಲೆಯು ಎಲ್ಲರ ಗಮನ ಸೆಳೆದ ಕಲಾಪ್ರಕಾರವಾಗಿದೆ. ಈ ಮಾದರಿಯಲ್ಲಿ ಅಂದಾನಿಯವರು ಗ್ರಾಮೀಣ ಸೊಗಡಿನ ಹಿನ್ನೆಲೆಯಲ್ಲಿ ಚಿತ್ರಗಳನ್ನು ರಚಿಸಿರುವುದು ಕಂಡುಬರುತ್ತದೆ. ಅದರಲ್ಲಿ ಮುಖ್ಯವಾಗಿ ತಾಯ್ತನದ ಸ್ವರೂಪವನ್ನು ಇವರ ಕಲೆಯಲ್ಲಿ ಕಾಣಬಹುದಾಗಿದೆ. ಗ್ರಾಮೀಣ ಭಾಗದ ಮಹಿಳೆಯರು ತಮ್ಮ ಜೀವನದಲ್ಲಿ ಸಂತಾನ ಪಡೆಯುವುದನ್ನು ಬಹುಮುಖ್ಯವಾಗಿ ಸ್ವೀಕರಿಸಿದ ಸಂಗತಿಯಾಗಿದೆ. ಮಗುವಿನ ಆರೈಕೆಗಾಗಿ ಅವರು ಸದಾ ಕಾತರರಾಗಿದ್ದು ಜಾಗೃತ ಪ್ರಜ್ಞೆಯನ್ನು ಹೊಂದಿರುತ್ತಾರೆ. ಮಗುವಿನ ಹಸಿವನ್ನು ನೀಗಿಸುವ ಶಕ್ತಿಯನ್ನು ಹೊಂದಿರುವ ಚಿತ್ರಣವನ್ನು ಅವರ ಕಲೆಯಲ್ಲಿ ಹೆಚ್ಚಾಗಿ ಕಾಣಬಹುದು. ಈ ಸಂದರ್ಭದಲ್ಲಿ ಅಂದಾನಿಯವರ ಕಲಾಕೃತಿಗಳನ್ನು ಈ ಕೆಳಗಿನಂತೆ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

**೧. ಮಗುವಿಗೆ ಮೊಲೆಹಾಲು ಕುಡಿಸುತ್ತಿರುವ ಮಹಿಳೆ (ಸ್ಥೂಲ ಕಾಯದ ಮಹಿಳೆ)**

೧೯೮೫ರಲ್ಲಿ ಪೇಪರ್ ಮೇಲೆ ಜಲವರ್ಣ ಮಾಧ್ಯಮದಲ್ಲಿ ರಚಿಸಲಾದ ಈ ಕೃತಿಯಲ್ಲಿ ಹಳದಿ ಕುಪ್ಪಸ ಮಹಿಳೆ ಮುಖದಲ್ಲಿ ಅದೇನೇ ಕುತೂಹಲದ ನೋಟವನ್ನು ಕಾಣಬಹುದಾಗಿದೆ.

ಅಂದಾನಿಯವರು ಗ್ರಾಮೀಣ ಭಾಗದ ಮಹಿಳೆಯರು ತಮ್ಮ ತಾಯ್ತನಕ್ಕೆ ಹೆಚ್ಚಿನ ಆದ್ಯತೆ ನೀಡುವುದನ್ನು ತಮ್ಮ ಚಿತ್ರಕಲೆಯಲ್ಲಿ ನಿರೂಪಿಸಿದ್ದಾರೆ. ಈ ಚಿತ್ರದಲ್ಲಿ ಹಳ್ಳಿಗಾಡಿನ ಸ್ತ್ರೀಯರು ಮಗುವಿಗೆ ಮೊಲೆಹಾಲನ್ನು ಕುಡಿಸುವ ರೀತಿಯನ್ನು ಬಿಂಬಿಸಿದ್ದಾರೆ. ತೆರೆದ ಎದೆಯಿಂದ ಮುಗುವಿಗೆ ಹಾಲುಣಿಸುತ್ತಾ ತನ್ನ ಕಂದಮ್ಮನ ಬೆಳವಣಿಗೆಯ ಬಗ್ಗೆ ಆಲೋಚನೆಯಲ್ಲಿ ತೊಡಗಿರುವುದನ್ನು ಮನಸ್ಸಿಗೆ ಹಿಡಿಸುವಂತೆ ಚಿತ್ರಿಸಿದ್ದಾರೆ. ಮಗನ ಚಿಂತೆಯಲ್ಲಿ ತಾಯಿ ಕುಳಿತಿರುವಂತೆ ಚಿತ್ರಿಸಲಾಗಿದೆ. ಇದು ಗ್ರಾಮೀಣ ಪರಿಸರದ ಸೂಕ್ಷ್ಮ ಸಂವೇದನೆಯನ್ನು ಸೂಚಿಸುವ ಚಿತ್ರವಾಗಿದೆ.

ಅಂದಾನಿಯವರು ಚಿತ್ರಿಸಿರುವ ಚಿತ್ರಗಳು ಹೆಚ್ಚಿನದಾಗಿ ಹೆಣ್ಣು, ಪರಿಸರ, ಸಮಾಜದ ಮುಖ್ಯವಾದ ಅಂಗಗಳನ್ನಿಟ್ಟುಕೊಂಡಿರುವುದು ಗಮನಾರ್ಹ. ಅಂದಾನಿಯವರು ಹೆಣ್ಣನ್ನು ತಮ್ಮ ಚಿತ್ರಗಳಲ್ಲಿ ಮುಖ್ಯ ಆಕರವನ್ನಾಗಿ ಆಯ್ದುಕೊಂಡಿದ್ದಾರೆ. "ತೊಟ್ಟಿಲು ತೂಗುವ ಕೈ ದೇಶವನ್ನಾಳಬಲ್ಲುದು" ಎಂಬ ಗಾದೆಯನ್ನು ಚಿತ್ರದ ಮೂಲಕ ಸೆರೆಹಿಡಿದಿದ್ದಾರೆ. ಹೆಣ್ಣು ಸಮಾಜದಲ್ಲಿ ಸಬಲೆಯಾಗಬೇಕೆಂಬುದು ಹಾಗೂ ಅದಕ್ಕೆ ಪೂರಕವಾದ ವಾತಾವರಣವನ್ನು ರೂಪಿಸಬೇಕಾಗುತ್ತದೆ. ಈ ಚಿತ್ರದಲ್ಲೂ ತಾಯಿ ಮಗುವಿಗೆ ಹಾಲುಣಿಸುವುದನ್ನು ಕಾಣಬಹುದು. ತಾಯಿಯು ಮಗುವಿಗೆ ಜನ್ಮ ನೀಡಿ ಅದನ್ನು ಬೆಳೆಸಿ ಸಮಾಜಕ್ಕೆ ಒಂದು ಕಾಣಿಕೆಯಾಗಿ ನೀಡುವಂತಹ ಜವಾಬ್ದಾರಿಯನ್ನು ಹೊಂದಿರುತ್ತಾಳೆ. ಅಂತಹ ಒಂದು ಸಮಾಜ ಬೆಳವಣಿಗೆಗೆ ಪೂರಕವಾದ ಕರ್ತವ್ಯವನ್ನು ತಾಯಿಯು ಮಾಡುತ್ತಿರುತ್ತಾಳೆ. ಇಲ್ಲಿ ತಾಯಿಯು ಮಗುವಿಗೆ ಹಾಲುಣಿಸುತ್ತಿದ್ದರೂ ಅವಳು ಬೇರೆನನ್ನೋ ಕುರಿತು ಯೋಚಿಸುತ್ತಿರುವಂತೆ ಕಾಣುತ್ತಿದೆ. ಒಟ್ಟಿನಲ್ಲಿ ತಾಯಿ ಮತ್ತು ಮಗುವಿನ ಈ ಸಂಬಂಧವು ಮೋಹಕತೆಯಿಂದ ಸೆರೆಹಿಡಿದಿದ್ದಾರೆ.

**೨. ಮಗುವನ್ನು ಎತ್ತಿಕೊಂಡು ಕುಳಿತಿರುವ ಮಹಿಳೆ (ಸ್ಥೂಲ ಕಾಯದ ಮಹಿಳೆ)**

ಪೇಪರ್ ಮೇಲೆ ಜಲವರ್ಣ ಮಾಧ್ಯಮದಿಂದ ರಚಿತವಾದ ಈ ಕಲಾಕೃತಿಯಲ್ಲಿ ಕೆಂಪು ಬಣ್ಣದ ಸೀರೆ ತೊಟ್ಟಿರುವ ಮಹಿಳೆಯು ದಟ್ಟ ಕಪ್ಪು ವರ್ಣದ ಮುಖವನ್ನು ಹೊಂದಿದ್ದು ಮಗುವನ್ನು ಎತ್ತಿಕೊಂಡು ಕುಳಿತಿದ್ದಾರೆ.

ಅಂದಾನಿಯವರ ಈ ಚಿತ್ರದಲ್ಲಿ ಬಡತನದ ಭೂತ ಎದ್ದು ಕಾಣುತ್ತದೆ. ಕೈ ತೋಳಿನಲ್ಲಿ ಮಗುವನ್ನು ಅಪ್ಪಿಕೊಂಡಿರುವ ಮಹಿಳೆ ಮುಂದಿನ ಬದುಕಿನ ಬಗ್ಗೆ ಚಿಂತಿಸುವಂತಿದೆ. ಕರಾಳ ದಿನಗಳನ್ನು ಎದುರಿಸುವ ಸ್ತ್ರೀ ಸ್ವತಂತ್ರವಾಗಿ ಬದುಕುವುದು ಹೇಗೆ ಎಂಬ ಆಲೋಚನೆಯನ್ನು ಹೊಂದಿರುವಂತಹ ಚಿತ್ರ ಇದಾಗಿದೆ. ಜಲವರ್ಣದಲ್ಲಿ ಬಿಡಿಸಲಾಗಿದೆ. ಅಲ್ಲದೇ ಕೆಂಪು ದೀಪದ ಪ್ರದೇಶಗಳಲ್ಲಿ ವಾಸಿಸುವ ಮಧ್ಯವಯಸ್ಕ ಮಹಿಳೆಯರ ಸ್ಥಿತಿಗತಿಯನ್ನು ಈ ಚಿತ್ರದಲ್ಲಿ ಕಾಣಬಹುದಾಗಿದೆ. ಇದು ಕತ್ತಲೆ ಜಗತ್ತು ಇದರಿಂದ ತಪ್ಪಿಸಿಕೊಳ್ಳುವುದು ಕಷ್ಟವೆಂದು ಸೂಚಿಸುವಂತಿದೆ.

**೩. ಸೆರಗನ್ನು ತಲೆಯ ಮೇಲೆ ಹಾಕಿಕೊಳ್ಳುತ್ತಿರುವ ಮಹಿಳೆ (ಸ್ಥೂಲ ಕಾಯದ ಮಹಿಳೆ)**

೧೧/೮ ಇಂಚು ಅಳತೆ ಹೊಂದಿರುವ ಈ ಕಲಾಕೃತಿಯು ಜಲವರ್ಣ ಮಾಧ್ಯಮದಲ್ಲಿ ಪೇಪರ್

ಅವಕಾಶವನ್ನು ಹೊಂದಿದ್ದು ಏಕ ವರ್ಣದಲ್ಲಿ ಕಲ್ಪನೆಯನ್ನು ಎತ್ತಿ ತೋರಿಸುವಂತೆ ಕೌಶಲ್ಯ ಪೂರಿತ ವರ್ಣ ಸಂಯೋಜನೆ ಮಾಡಿರುವುದು ಕಂಡುಬರುತ್ತದೆ. ನೀಲಿ ಬಣ್ಣ ಕುಪ್ಪಸ, ಸೀರೆ ತೊಟ್ಟಿರುವ ಈ ಮಹಿಳೆಯ ಚಿತ್ರವು ೧೯೮೫ ರಲ್ಲಿ ರಚಿಸಲಾಗಿದೆ.

ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯರನ್ನು ನೋಡುವ ದೃಷ್ಟಿಕೋನವನ್ನು ಈ ಚಿತ್ರದಲ್ಲಿ ಚಿತ್ರಿಸಲಾಗಿದೆ. ಮಾನ ಮರ್ಯಾದೆ ಊರಿನ ಹಿರಿಕರು, ದೊಡ್ಡವರು ಮುಂತಾದವರಿಗೆ ಗೌರವವನ್ನು ಸೂಚಿಸಲು ಮಹಿಳೆಯರು ತಟ್ಟನೆ ಸೆರಗನ್ನು ತಲೆಯ ಮೇಲೆ ಹಾಕಿಕೊಳ್ಳುವುದು ಗ್ರಾಮೀಣ ಜನರಲ್ಲಿ ಕಂಡುಬರುವ ಪದ್ಧತಿಯಾಗಿದೆ. ಇದರ ಹಿಂದೆ ಪುರುಷ ಕೇಂದ್ರೀಕೃತ ವ್ಯವಸ್ಥೆಯ ಹುನ್ನಾರ ಇರಬಹುದೇನೋ ಎನಿಸುತ್ತದೆ. ಇಲ್ಲಿ ಮಹಿಳೆ ತನ್ನ ಸೀರೆಯ ಸೆರಗನ್ನು ತಲೆಯ ಮೇಲೆ ಹಾಕಿಕೊಳ್ಳುವ ಸಂದರ್ಭದಲ್ಲಿ ಆ ಮಹಿಳೆಯ ಸ್ಥನಗಳು ಮತ್ತು ಹೊಕ್ಕಳು ಕಾಣಿಸುತ್ತದೆ. ಗೌರವವನ್ನು ಸ್ವೀಕರಿಸುವ ನೆಪದಲ್ಲಿ ಸ್ತ್ರೀಯರ ಅಂಗಾಂಗಗಳನ್ನು ಗಮನಿಸುವ ಅಂಶ ಈ ಚಿತ್ರದಿಂದ ತಿಳಿದುಬರುತ್ತದೆ. ಗ್ರಾಮೀಣ ಸಮಾಜದಲ್ಲಿ ಪೋಷಿಸಿಕೊಂಡು ಬಂದ ಈ ಪದ್ಧತಿ ಇಂದಿಗೂ ಚಾಲ್ತಿಯಲ್ಲಿರುವುದನ್ನು ಗಮನಿಸಬಹುದಾಗಿದೆ.

### ೪. ಬೆನ್ನು ಉಜ್ಜಿಕೊಳ್ಳಲು ಪ್ರಯತ್ನಿಸುತಿರುವ ಮಹಿಳೆ (ಸ್ಥೂಲ ಕಾಯದ ಮಹಿಳೆ)

ಈ ಚಿತ್ರದಲ್ಲಿ ದಪ್ಪನೆ ಕಾಯದ ಮಹಿಳೆ ಕುಳಿತುಕೊಂಡು ಬೆನ್ನುಜ್ಜಿಕೊಳ್ಳಬೇಕಾದರೆ ತೊಂದರೆಯನ್ನು ಅನುಭವಿಸುತ್ತಿರುವಂತಿದೆ. ಇದು ಕುಳಿತಾಗ ದೇಹದ ಎಲ್ಲಾ ಭಾಗಗಳಲ್ಲಿ ಕೀಲುನೋವು ಕಾಣಿಸಿಕೊಳ್ಳುತ್ತಿರುವ ದೃಶ್ಯವಾಗಿದೆ. ಇವರಿಗೆ ದೇಹಕ್ಕೆ ಬೇಕಾದ ಉಡುಪುಗಳ ಕೊರತೆಯನ್ನು ಸಹ ಇಲ್ಲಿ ಚಿತ್ರಿಸಲಾಗಿದೆ. ಯಾತನಾಮಯ ಬದುಕಿನ ಅನಾವರಣ ಇಲ್ಲಿದೆ.

### ೪.೬. <u>ಸ್ಥೂಲಕಾಯದ ಮಹಿಳೆಯ ರೇಖಾ ಸರಣಿಯ ಚಿತ್ರಗಳು</u>

### ರೇಖಾಚಿತ್ರ ಚಾರಿತ್ರಿಕ ಹಿನ್ನಲೆ



ಚಿತ್ರಕಲೆ ಇತಿಹಾಸ ಆರಂಭವಾಗುವದೇ ರೇಖಾಚಿತ್ರಗಳಿಂದ ದಕ್ಷಿಣ ಫ್ರಾನ್ಸ್ ಹಾಗೂ ಸ್ಪೇನ್‌ಗಳಲ್ಲಿ ಹಬ್ಬಿರುವ ಕಾಂಟಬ್ರಯನ್ ಪರ್ವತ ಶ್ರೇಣಿಗಳಲ್ಲಿ ಪೂರ್ವ ಪ್ಯಾಲಿಯೂಲಿಥಿಕ್ ಕಾಲದ ಆದಿಮ ಬೇಟೆಗಾರರು ಗುಹೆಗಳ ಭಿತ್ತಿಯಲ್ಲಿ ರಚಿಸಿದ ಚಿತ್ರಗಳಲ್ಲಿ ರೇಖಾಚಿತ್ರದ ಅಂಶಗಳಿದ್ದು ಇವುಗಳಿಗೆ ಪ್ರಪಂಚದ ಆದಿಮ ರೇಖಾಚಿತ್ರಗಳೆಂದು ಗುರ್ತಿಸಿದ್ದಾರೆ ಎಂದು ಅ.ಲ.ನ ತಮ್ಮ ಲೇಖನದಲ್ಲಿ ಪ್ರಸ್ತಾಪಿಸುತ್ತಾರೆ.[೩೨] ಇಂದು ನಿನ್ನೆ ಹುಟ್ಟಿಕೊಂಡುದಲ್ಲ ಮಂಗನಿಂದ ಮಾನವ ರೂಪಗೊಂಡಾಗಲೇ ರೇಖೆಗಳ ಮೂಲಕ ತನ್ನ ಮಾತುಗಳಿಗೆ ಭ್ರಮಾತ್ಮಕ ರೂಪಗಳನ್ನು ನೇಡುತೊಡಗಿದ ಅದರ ಪರಿಣಾಮವಾಗಿ ಶಿಲಾಯುಗದಲ್ಲಿ ಆದಿಮಲ್ಲಿಯೇ ಗುಹಾ ಆಶ್ರಯದಲ್ಲಿ ರೇಖಾಚಿತ್ರಗಳು ಆದಿಮಾನವರಿಂದ ರಚಿತಗೊಂಡವು. ಅವು ಕ್ರಮೇಣ ಅವರ ಅಭಿವ್ಯಕ್ತಿ ತುಡಿತಗಳಾಗಿ ಬೆಳಕಿಗೆ ಬಂದವು. ಅವುಗಳಲ್ಲಿ ಮನುಷ್ಯ ಬೇಟೆಯಾಡುವ, ಪ್ರಾಣಿಗಳ ಕೃಷಿಗೆ ಸಂಬಂಧಪಟ್ಟ ಚಿತ್ರಗಳು

ಶಿಲೆಗಳ ಮೇಲೆ ರಚಿತಗೊಂಡಿವೆ. ನಾವು ಮನುಷ್ಯನ ಅಭಿವ್ಯಕ್ತಿ ಸಾಧ್ಯಾ ಸಾಧ್ಯತೆಗಳನ್ನು ಮೊದಲಿಗೆ ಕಂಡುಕೊಂಡಿರುವುದಲ್ಲಿ ಪ್ರಾಗಿತಿಹಾಸದ ರೇಖಾಚಿತ್ರಗಳಿಂದ.

### ರೇಖೆ

"ಕಲಾವಿದನೊಬ್ಬನನ್ನು ನಿಜಕ್ಕೂ ಬಯಲು ಮಾಡುವುದು ರೇಖಾಚಿತ್ರಗಳಿಗೆ ಅದು ಅವನ ಸಹಿ ಇದಂತೆ" ಎನ್ನುವ ಮಾತುಂಟು. ವ್ಯಕ್ತಿಯೊಬ್ಬನ ಕೈಬರವಣಿಗೆಯಂತೆಯೇ ರೇಖಾಚಿತ್ರವೊಂದು ಕಲಾವಿದನ ಆ ಸಂದರ್ಭದ ಚಿಂತನೆ ಮತ್ತು ಮನಃಸ್ಥಿತಿಗಳನ್ನು ಪ್ರತಿಬಿಂಬಿಸುತ್ತದೆ".[೩೮]

ಒಬ್ಬ ಚಿತ್ರಕಾರನ ಚಿತ್ರ ಕಲಿಕೆ ಆರಂಭವಾಗುವುದೇ ರೇಖೆಗಳಿಂದ. ಕಲಿಕೆಯ ಆರಂಭದಲ್ಲಿಯೇ ಅವನ ಕಲೆಯ ಪ್ರತಿಭೆಯ ಆಳವನ್ನು ರೇಖೆಗಳಿಂದ ಗುರುತಿಸಬಹುದಲ್ಲದೇ, ಆತಂಕ ತುಡಿತಗಳನ್ನು ಕೂಡ ಗ್ರಹಿಸಲು ರೇಖೆ ಪ್ರಮುಖ ಮಾನದಂಡವಾಗುತ್ತದೆ. ರೇಖೆಯಲ್ಲದೇ ಚಿತ್ರ ಪೂರ್ಣಗೊಳ್ಳುವುದಿಲ್ಲ ರೇಖೆಗಳ ಲಾಲಿತ್ಯವೇ ಒಂದು ಪರಿಪೂರ್ಣ ಚಿತ್ರಕ್ಕೆ ಜೀವ ತುಂಬುಹುದು. ಈ ಜೀವ ತುಂಬುವ ಕಲಾವಿದನಿಗೆ ಪ್ರಾಥಮಿಕವಾಗಿ ರೇಖೆಗಳ ಜ್ಞಾನವಿಲ್ಲದಿದ್ದರೆ, ಕಲೆಯಲ್ಲಿ ಅವನೊಬ್ಬ ಅಜ್ಞಾನಿಯೇ.

ಆಕ್ಸಫರ್ಡ್ ಯೂನಿವರ್ಸಲ್ ಡಿಕ್ಷನರಿಯ ಪ್ರಕಾರ ರೇಖಾಚಿತ್ರಗಳೆಂದರೆ "ಲೇಖನಿ, ಪೆನ್ಸಿಲ್ ಅಥವಾ ಕ್ರಯಾನನಿಂದ ರೂಪಿಸುವುದು" ಎಂದು ಹೇಳುತ್ತಾ ಮುಂದೆ "ವರ್ಣ ಚಿತ್ರಣದಿಂದ ಭಿನ್ನವಾದ ರೀತಿಯಲ್ಲಿ ರೂಪಣೆ" ಎನ್ನುತ್ತೇವೆ.[೩೯]

ರೇಖೆ ಒಂದು ಕಲ್ಪನಾ ವಸ್ತು ಎಂದು ಭಾವಿಸಿದರೂ ಅದನ್ನು ಮಾಧ್ಯಮವೆಂದು ತೆಗೆದುಕೊಂಡಾಗ ಅದಕ್ಕೇ ಒಂದು ವಿಶೇಷ ಚೈತನ್ಯ ಇರುವ ಸಂಗತಿ ಅನುಭವವಾಗುತ್ತದೆ. ರೇಖೆಯ ನಾನಾ ರೀತಿಯ ಉಪಯೋಗದಿಂದ ವಿವಿಧ ಭ್ರಮೆ ಉಂಟು ಮಾಡಬಹುದು. ವಿಧ ವಿಧ ಕಲ್ಪನೆ ಮಾಡಿಸಬಹುದು.

### ಆರೋಗ್ಯ

ಊಟಬಲ್ಲವನಿಗೆ ರೋಗವಿಲ್ಲ ಮಾತುಬಲ್ಲವನಿಗೆ ಜಗಳವಿಲ್ಲ ಎಂಬ ಗಾದೆ ಮಾತನ್ನು ಗಮನಿಸಿರುವ ಅಂದಾನಿಯವರು ಆರೋಗ್ಯದ ಕುರಿತು ತಮ್ಮ ಚಿತ್ರಗಳಲ್ಲಿ ಚಿತಿಸಿರುವುದು ಕಂಡುಬರುತ್ತದೆ. ಮನುಷ್ಯನಿಗೆ ಆರೋಗ್ಯ ಬಹಳ ಮುಖ್ಯವಾಗಿರುತ್ತದೆ. ಅನಾರೋಗ್ಯ ಪೀಡಿತರಾದರೆ ಆಗುವ ಸಮಸ್ಯೆಗಳನ್ನು ಕುರಿತು ಗಮನ ಸೆಳೆದಿದ್ದಾರೆ. ದೊಡ್ಡ ಹೊಟ್ಟೆಯ ಬೊಜ್ಜು ಮೈಯನ್ನು ಹೊಂದಿರುವ ಅಗಲವಾದ ದೇಹದಿಂದ ದೈತ್ಯಾಕಾರವಾಗಿ ಕಾಣುವ ಮಹಿಳೆ ಚಿತ್ರಗಳು ಮನಸೆಳೆಯುವಂತಿವೆ. ಇಲ್ಲಿ ಸೂಚಿಸಿರುವ ಲಕ್ಷಣಗಳು ಬಹುತೇಕವಾಗಿ ಅನಾರೋಗ್ಯದ ಲಕ್ಷಣಗಳಾಗಿವೆ. ಈ ಬಗೆಯಲ್ಲಿ ದಪ್ಪನಾಗಿ ಬೆಳೆಯುವ ವ್ಯಕ್ತಿಗಳು ಕೌಟುಂಬಿಕ ಶ್ರೀಮಂತರಿರುತ್ತಾರೆ. ಅವರು ಸೇವಿಸುವ ಆಹಾರವು ಅವರ ಆರೋಗ್ಯವನ್ನು ಹಾಳುಮಾಡಿದೆ ಎಂಬುದಾಗಿ ತಿಳಿದುಬರುತ್ತದೆ. ಇತ್ತೀಚೆಗೆ ಬಹುತೇಕ ಮಹಿಳೆಯರು ದೃಢಕಾಯರಾಗಿ

ರೂಪುಗೊಳ್ಳುತ್ತಿದ್ದಾರೆ. ಅದಕ್ಕೆ ಕುರುಕಲು ಪದಾರ್ಥಗಳು ಅತಿಯಾದ ಎಣ್ಣೆ ಸೇವನೆ ಕುಳಿತಲ್ಲೇ ಕುಳಿತುಕೊಳ್ಳುವುದು ದೇಹ ದಣಿಯುವಂತಹ ಕೆಲಸ ಮಾಡದಿರುವುದು, ಮಾನಸಿಕವಾಗಿ ಅಸ್ವಸ್ಥರಾಗಿರುವುದು ಕೊಬ್ಬಿನ ಅಂಶಗಳನ್ನು ಹೊಂದಿರುವ ಆಹಾರವನ್ನು ಹೆಚ್ಚಾಗಿ ಸೇವಿಸುವುದು ಮುಂತಾದ ಅಂಶಗಳು ಆರೋಗ್ಯವನ್ನು ಹಾಳುಮಾಡುವಂತಹುಗಳಾಗಿವೆ. ಆರೋಗ್ಯವನ್ನು ಪ್ರತಿಯೊಬ್ಬರೂ ಕಾಪಾಡಿಕೊಳ್ಳಬೇಕೆಂಬ ಸಂದೇಶವನ್ನು ಸಾರಲು ಚಿತ್ರಕಲೆಯನ್ನು ಬಳಸಿಕೊಂಡರೂ ಆ ಮೂಲಕ ಉತ್ತಮ ಪರಿಸರಕ್ಕಾಗಿ ಪ್ರಯತ್ನವನ್ನು ಮಾಡಲು ಸೂಚಿಸಿರುವುದು ಕಂಡುಬರುತ್ತದೆ.

**೧. ನಡೆದಾಡಲು ಪ್ರಯತ್ನಿಸುತ್ತಿರುವ ಮಹಿಳೆ (ಸ್ಥೂಲ ಕಾಯದ ಮಹಿಳೆ)**

ಈ ರೇಖಾಚಿತ್ರವು ೧೧/೧೫ ಇಂಚು ಆಳತೆಯನ್ನು ಹೊಂದಿದ್ದು ೨೦೧೩ರಲ್ಲಿ ಮಾರ್ಕರ್ ಪೆನ್ನಿನಿಂದ ಪೇಪರ್ ಮೇಲೆ ರಚಿಸಿದ್ದಾರೆ. ಇಲ್ಲಿ ಹೊರ ರೇಖೆಗಳಿಂದ ರೇಖಾಚಿತ್ರವು ಪೂರ್ಣಗೊಂಡಿದ್ದು. ಉಟ್ಟಿರುವ ಸೀರೆ ರೇಖೆಗಳಿಂದ ಅಲಂಕರಿಸಿರುವುದು ಕಂಡುಬರುತ್ತದೆ.

ಈ ಚಿತ್ರದಲ್ಲಿ ಮಹಿಳೆ ವಾಯುವಿಹಾರಕ್ಕೆ ಹೋಗುವ ಸಿದ್ಧತೆಯಲ್ಲಿರುವುದನ್ನು ಕಾಣಬಹುದು. ಏಕೆಂದರೆ ಕುಳಿತಲ್ಲೇ ಕುಳಿತು ಬೊಜ್ಜುದೇಹ ಹೊಂದಿದ್ದರಿಂದ ಅದನ್ನು ಕರಗಿಸಲು ರಕ್ತದೊತ್ತಡ, ಸಕ್ಕರೆ ಕಾಯಿಲೆ, ಕ್ಷಯ ಮುಂತಾದ ಕಾಯಿಲೆಗಳನ್ನು ನಿಯಂತ್ರಿಸಲು ವೈದ್ಯರ ಸಲಹೆಯ ಮೇರೆ ವಾಯುವಿಹಾರಕ್ಕೆ ಹೋಗಲು ಪೂರ್ವಸಿದ್ಧತೆಯನ್ನು ಮಾಡಿಕೊಳ್ಳುತ್ತಿರುವಂತಿದೆ. ಸರಳ ಜೀವನಶೈಲಿಗೆ ತಿಲಾಂಜಲಿ ಇಟ್ಟಿರುವ ಪ್ರತೀಕವಾಗಿ ಈ ಬಗೆಯಲ್ಲಿ ಬೊಜ್ಜುದೇಹ ರಚನೆಯಾಗಿದೆ. ನಡೆದುಕೊಂಡು ಹೋಗಲು ಪ್ರಯತ್ನಿಸುತ್ತಿದ್ದರೂ ಕೀಲುನೋವಿನಿಂದ ಮುಖ ಸಿಂಡರಿಸಿಕೊಂಡಿರುವ ಚಿತ್ರ ನಮಗೆ ಗೋಚರಿಸುತ್ತದೆ. ಇದು ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿರುವ ಮತ್ತು ಆರೋಗ್ಯದಿಂದ ಕೆಟ್ಟಸ್ಥಿತಿಯಲ್ಲಿರುವ ಮಹಿಳೆಯನ್ನು ಬಿಂಬಿಸುತ್ತದೆ.

**೨. ಸೋಫಾದ ಮೇಲೆ ಕುಳಿತಿರುವ ಮಹಿಳೆ (ಸ್ಥೂಲ ಕಾಯದ ಮಹಿಳೆ)**

ಈ ರೇಖಾಚಿತ್ರವು ೧೧/೧೫ ಇಂಚು ಆಳತೆಯನ್ನು ಹೊಂದಿದ್ದು ೨೦೧೨ ರಲ್ಲಿ ಮಾರ್ಕರ್ ಪೆನ್ನಿನಿಂದ ಪೇಪರ್‌ನಲ್ಲಿ ರಚಿಸಲಾಗಿದೆ. ಈ ರೇಖಾಚಿತ್ರದಲ್ಲಿ ಒಬ್ಬ ಸ್ಥೂಲಕಾಯದ ಮಹಿಳೆಯು ಸೋಫಾ ಮೇಲೆ ಕುಳಿತಿರುವುದನ್ನು ಕಾಣುತ್ತೇವೆ. ಈ ರೇಖಾಚಿತ್ರವನ್ನು ನೋಡಿದರೆ ಮತ್ತೊಬ್ಬರಿಗೆ ಸನ್ನೆಯನ್ನು ಮಾಡಿ ಕರೆಯುವ ರೀತಿಯಲ್ಲಿದ್ದು. ಅವರು ಸುತ್ತಿರುವ ಸೀರೆಯನ್ನು ರೇಖೆಗಳಿಂದ ಅಲಂಕರಿಸಿದ್ದು ಅವರು ಕುಳಿತಿರುವ ಎಡಗಡೆ ಹೂವಿನ ಕುಂಡವಿದ್ದು, ಕುಂಡದಲ್ಲಿರುವ ಹೂವಿನ ಗಿಡದ ತುಂಬೆಲ್ಲ ಹೂವುಗಳು ಅರಳಿರುವುದನ್ನು ಕಾಣುತ್ತೇವೆ.

ಐಶಾರಾಮಿ ಜೀವನಕ್ಕೆ ಆದ್ಯತೆ ನೀಡಿರುವ ಇಂದಿನ ಜೀವನದಲ್ಲಿ ಆಧುನಿಕ ಪರಿಕರಗಳನ್ನು ಬಳಸುವುದು ಪ್ರತಿಷ್ಟೆಯಾಗಿ ರೂಪುಗೊಂಡಿದೆ. ಈ ಚಿತ್ರವನ್ನು ಗಮನಿಸಿದರೆ ಶ್ರೀಮಂತ ವರ್ಗದ ಮಹಿಳೆಯರಲ್ಲಿ ಈ ಕಾಯಿಲೆ ಹೆಚ್ಚಾಗಿ ಕಾಣಿಸುತ್ತದೆ ಎಂಬುದನ್ನು ಅದ್ಭುತವಾಗಿ ಸರೆಹಿಡಿದಿದ್ದು

ಶ್ಲಾಘನೀಯ. ಶ್ರಮಜೀವಿಗಳಾಗಿ ಬದುಕಿ ಸರಳವಾದ ಜೀವನಶೈಲಿಯನ್ನು ಅಳವಡಿಸಿಕೊಳ್ಳಲು ಕರೆ ನೀಡಲಾಗಿದೆ. ಅಲ್ಲದೇ ಈ ಮಹಿಳೆ ಕುಳಿತುಕೊಂಡರೆ ಎದ್ದು ನಿಲ್ಲಲಾಗುವುದಿಲ್ಲ. ಆಕೆಗೆ ಮತ್ತೊಬ್ಬರ ಸಹಾಯದ ಅಗತ್ಯವಿದೆ. ಹಾಗಾಗಿ ಎದ್ದುನಿಲ್ಲಲು ತಮ್ಮ ಕುಟುಂಬದವರು ಯಾರನ್ನೋ ಕರೆಯುತ್ತಿರುವಂತಿದೆ. ತಲೆಯಲ್ಲಿ ಹಲವಾರು ಚಿಂತನೆಗಳಿದ್ದರೂ ದೇಹದ ಅತಿಯಾದ ತೂಕದಿಂದ ಇನ್ನೊಬ್ಬರ ಸಹಾಯವನ್ನು ಪಡೆಯಲೇಬೇಕು. ಅಲ್ಲದೆ ಇದಕ್ಕೆ ಪೂರಕವಾಗಿ ಹಣದ ಮದದಿಂದ ನಾನಾರಿಗೂ ಕಮ್ಮಿಯಿಲ್ಲ. ನನಗೆ ಬೇರೆಯವರ ಹಂಗು ಬೇಕಿಲ್ಲ. ಎಂಬ ಮಾತುಗಳು ಶ್ರೀಮಂತ ವರ್ಗದವರಿಂದ ಕೇಳಿಬರುತ್ತವೆ. ಆದರೆ ಬೊಜ್ಜು ದೇಹವನ್ನು ಹೊಂದಿರುವ ವ್ಯಕ್ತಿ ಇನ್ನೊಬ್ಬರ ಸಹಾಯವನ್ನು ಯಾಚಿಸಲೇಬೇಕು ಎಂಬ ಸಂದೇಶವಿದೆ. ಅಲ್ಲದೇ ಸಮಾಜದಲ್ಲಿ ಪ್ರತಿಯೊಬ್ಬರು ಪರಸ್ಪರ ಸಹಕಾರದಿಂದ ಇರಲೇಬೇಕು. ಅಹಂಕಾರದಿಂದ ವರ್ತಿಸಬಾರದು ಎಂಬುದನ್ನು ಅಂದಾನಿಯವರು ಚಿತ್ರದ ಮೂಲಕ ಬಿಂಬಿಸಿದ್ದಾರೆ.

**೩. ಅನಾರೋಗ್ಯದ ಕಡೆಗೆ (ಸ್ಥೂಲ ಕಾಯದ ಮಹಿಳೆ)**

೨೦೧೩ರಲ್ಲಿ ಈ ರೇಖಾಚಿತ್ರವನ್ನು ಪೇಪರ್ ಮೇಲೆ ಪೆನ್ನಿನ ಮುಖಾಂತರ ರಚಿಸಿದ್ದಾರೆ. ಈ ಕೃತಿಯು ಸಂಪೂರ್ಣ ರೇಖಾಪ್ರಧಾನವಾಗಿದ್ದು ಇಲ್ಲಿ ಬಳಕೆಯಾಗಿರುವ ರೇಖೆಗಳು ಕಲಾವಿದ ಕೌಶಲ್ಯಪೂರ್ಣ ಅಭಿವ್ಯಕ್ತಿಯನ್ನು ಪ್ರತಿನಿಧಿಸುವಂತೆ ವ್ಯಕ್ತವಾಗಿವೆ. ಈ ಆಕೃತಿಯಲ್ಲಿ ಮಹಿಳೆಯು ಮುಖದಲ್ಲಿನ ಹಾವಭಾವವನ್ನು ಯಥಾವತ್ತಾಗಿ ಚಿತ್ರಸಿರುವ ಅಂದಾನಿಯವರು ರೇಖೆಗಳಲ್ಲಿ ಹಿಡಿತ ಸಾಧಿಸಿರುವುದರ ಈ ರೇಖಾಕೃತಿಯಿಂದ ಮನಗಾಣ ಬಹುದಾಗಿದೆ.

ಈ ಚಿತ್ರದಲ್ಲಿ ಬೊಜ್ಜು ದೇಹವನ್ನು ಹೊಂದಿರುವ ಮಹಿಳೆ ಅನುಭವಿಸುತ್ತಿರುವ ಯಾತನೆಯನ್ನು ಕುರಿತು ಚಿತ್ರಿಸಲಾಗಿದೆ. ಕುಳಿತುಕೊಳ್ಳಲು ಆಗದಂತಹ ಸ್ಥಿತಿ, ಅಲ್ಲದೇ ಆಯಾಸ, ಉಬ್ಬಸ ಕಂಡುಬರುತ್ತದೆ. ಮುಖದಲ್ಲಿ ಕಾಂತಿಯುತವಾದ ಕಳೆಯೇ ಇಲ್ಲ. ಸಪ್ಪೆ ಮೋರೆಯನ್ನು ಹೊಂದಿರುತ್ತಾರೆ ಎಂಬುದು ಇದರ ಸಂದೇಶ. ಬೊಜ್ಜು ದೇಹಕ್ಕೆ ಅವರ ವಂಶಾವಳಿ ಕಾರಣವಿರಬಹುದು. ಅಲ್ಲದೇ ಯಾವುದೇ ಬೆವರು ಸುರಿಸುವಂತಹ ಕೆಲಸ ಮಾಡದೇ ಎಣ್ಣೆಯಲ್ಲಿ ಕರಿದ ಅತಿಯಾದ ಪದಾರ್ಥಗಳ ಸೇವನೆ ಇದಕ್ಕೆ ಕಾರಣ ಎನ್ನಬಹುದು. ದೇಸಿ ಜೀವನಶೈಲಿಯ ಬದಲಾಗಿ ವೈಭವಿತ ಜೀವನಶೈಲಿಯೇ ಇದಕ್ಕೆ ಕಾರಣವೆನ್ನಬಹುದು. ನಗರೀಕರಣ ಮತ್ತು ಆಧುನಿಕ ಪದ್ಧತಿಯ ಜೀವನಕ್ರಮದಿಂದಾಗಿ ಮಾನವನ ಜೀವನ ಹೇಗೆ ಅನಾರೋಗ್ಯದ ಕಡಗೆ ಸಾಗುತಿದೆ. ಎಂಬುದು ಮತ್ತು ಗ್ರಾಮೀಣ ಬದುಕಿನ ಮಹತ್ವವನ್ನು ಈ ಕಲಾಕೃತಿ ಸಾಂಕೇತಿಸುತ್ತದೆ.

**೪. ಮಂಚದ ಜೋಕಾಲಿಯ ಮೇಲೆ ಕುಳಿತ ಮಹಿಳೆ (ಸ್ಥೂಲ ಕಾಯದ ಮಹಿಳೆ)**

೧೯೯೩ರಲ್ಲಿ ಈ ಕಲಾಕೃತಿಯು ಪೇಪರ್ ಮೇಲೆ ಪೆನ್ನಿನಿಂದ ರೇಖೆಗಳನ್ನು ಎಳೆಯಲಾಗಿದೆ. ರೇಖಾಪ್ರಧಾನವಾದ ಕೃತಿಯಲ್ಲಿ ತೂಗುಯ್ಯಾಲೆಯಲ್ಲಿ ಕುಳಿತಿರುವ ಮಹಿಳೆಯನ್ನು ರಚಿಸಿದ್ದಾರೆ.

ಈ ಚಿತ್ರ ಸ್ಥೂಲಕಾಯವನ್ನು ಹೊಂದಿರುವ ಮಹಿಳೆಯ ಕೌಟುಂಬಿಕ ಹಿನ್ನೆಲೆಯನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ಆಸ್ತಿ–ಅಂತಸ್ತು ಎಲ್ಲವೂ ಇದೆ ಆದರೆ ಅನುಭವಿಸಲಾಗುತ್ತಿಲ್ಲ. ಏಕೆಂದರೆ ಬೊಜ್ಜು ದೇಹವೇ ಕಾರಣ. ಆರೋಗ್ಯದ ಕಡೆ ಹೆಚ್ಚಿನ ಗಮನಹರಿಸದಿರುವುದು ಕಂಡುಬರುತ್ತದೆ. ಕಬ್ಬಿಣದ ಚೈನು ಮತ್ತು ಮಂಚದಿಂದ ನಿರ್ಮಿತಗೊಂಡ ಜೋಕಾಲಿಯನ್ನು ಬಹುತೇಕವಾಗಿ ಶ್ರೀಮಂತ ವರ್ಗದ ಮನೆಗಳಲ್ಲಿ ಕಾಣುತ್ತೇವೆ. ಬೇಸರವಾದಂತಹ ಸಂದರ್ಭದಲ್ಲಿ ದಣಿವಾರಿಸಿಕೊಳ್ಳಲು ಈ ಜೋಕಾಲಿಯನ್ನು ಬಳಸಿಕೊಳ್ಳಲಾಗುತ್ತದೆ. ಆದರೆ ಜೋಕಾಲಿಯ ಮೇಲೆ ಕುಳಿತ ಬಳಿಕ ಉತ್ಸಾಹವೆಲ್ಲಾ ಕುಂದಿಹೋಗಿ ಜೋಕಾಲಿಯನ್ನು ತೂಗಿಕೊಳ್ಳುವಷ್ಟು ಸಾಮರ್ಥ್ಯವಿಲ್ಲದಿರುವುದನ್ನು ಅಂದಾನಿಯವರು ಚಿತ್ರಿಸಿದ್ದಾರೆ. ಸೀರೆಯ ಅಂಚು, ವಿನ್ಯಾಸ, ಮಂಚದ ಅಲಂಕಾರ ಮುಂತಾದವುಗಳಲ್ಲಿ ಶ್ರೀಮಂತಿಕೆಯನ್ನು ಬಿಂಬಿಸುವಂತೆ ಚಿತ್ರಿಸಲಾಗಿದೆ.

### ೫. ಗೆಳತಿರ ನಡುವಿನ ಚರ್ಚೆ (ಸ್ಥೂಲ ಕಾಯದ ಮಹಿಳೆಯರು)

ಈ ರೇಖಾಚಿತ್ರವು ೧೧/೧೫ ಇಂಚು ಆಳತೆಯನ್ನು ಹೊಂದಿದ್ದು. ೨೦೧೨ರಲ್ಲಿ ರಚಿಸಲಾಗಿದೆ. ರೇಖಾಚಿತ್ರ ಪೇಪರ್ ಮೇಲೆ ಪೆನ್ನಿನ ಮುಖಾಂತರ ರಚಿಸಿದ್ದಾರೆ. ಈ ಕೃತಿಯು ಸಂಪೂರ್ಣ ರೇಖಾಪ್ರಧಾನವಾಗಿದ್ದು ಇಲ್ಲಿ ಬಳಕೆಯಾಗಿರುವ ರೇಖೆಗಳು ಕಲಾವಿದ ಕೌಶಲ್ಯಪೂರ್ಣ ಅಭಿವ್ಯಕ್ತಿಯನ್ನು ಪ್ರತಿನಿಧಿಸುವಂತೆ ವ್ಯಕ್ತವಾಗಿವೆ.

ಈ ರೇಖಾಚಿತ್ರದಲ್ಲಿ ಇಬ್ಬರು ಸ್ಥೂಲಕಾಯದ ಮಹಿಳೆಯರು ಮಾತುಕತೆಯಲ್ಲಿ ತೊಡಗಿರುವ ಸನ್ನಿವೇಶ ಇದಾಗಿದ್ದು. ಹೊರ ರೇಖೆಗಳಿಂದ ಕಲಾಕೃತಿಯನ್ನು ಪೂರ್ಣಗೊಳಿಸಿದ್ದು. ಅವರು ಉಟ್ಟಿರುವ ಸೀರೆಯನ್ನು ರೇಖೆಗಳಿಂದ ಸುಂದರಿಸಿ ಕಲಾಕೃತಿಯನ್ನು ರಚಿಸಿದ್ದಾರೆ. ಚಿತ್ರದಲ್ಲಿ ಇಬ್ಬರು ಸ್ಥೂಲಕಾಯವನ್ನು ಹೊಂದಿರುವ ಮಹಿಳೆಯರು ಒಂದು ಕಡೆ ಪರಸ್ಪರ ತನ್ನ ದೇಹದ ಬಗ್ಗೆ ಚರ್ಚಿಸಿದಂತೆ ಕಂಡುಬರುತ್ತದೆ. ಯಾವುದೋ ಆಶ್ಚರ್ಯಕರ ಘಟನೆಯ ಕುರಿತು ಮಾತನಾಡುತ್ತಿರುವದು ಮತ್ತು ಅವರ ಮುಖದಲ್ಲಿ ಮೂಡಿದ ಭಾವನೆಗಳು ವ್ಯಕ್ತವಾಗಿರುವುದು ಕಾಣುತ್ತಿವೆ.

### ೬. ಬೆಳಗ್ಗೆ ಎದ್ದು ವರಾಂಡದಲ್ಲಿ ಕುಳಿತಿರುವ ಮಹಿಳೆ (ಸ್ಥೂಲ ಕಾಯದ ಮಹಿಳೆ)

ಈ ಚಿತ್ರದಲ್ಲಿ ಬಹುತೇಕವಾಗಿ ವರ್ತಮಾನದ ಸಂದರ್ಭದಲ್ಲಿ ದೇಹದ ತೂಕವನ್ನು ಇಳಿಸಲು ಹರಸಾಹಸ ಪಡುತ್ತಿರುವುದನ್ನು ಕಾಣುತ್ತೇವೆ. ಅದರಲ್ಲಿ ಮಹಿಳೆಯರು ಬೆವರು ಸುರಿಸುವ ಕೆಲಸ ಮಾಡದಂತಾಗಿದೆ. ಕುಳಿತಲ್ಲಿಯೇ ಎಲ್ಲವೂ ದೊರೆಯಬೇಕು ಎಂಬ ಮನೋಧೋರಣೆ ಇದೆ. ಅದಕ್ಕಾಗಿ ಅಡುಗೆ ಮಾಡಲು ಒಂದು ಆಳನ್ನು ನೇಮಿಸಿಕೊಳ್ಳಬೇಕಾಗುತ್ತದೆ. ಶ್ರಮವಹಿಸದೇ ಅತಿಯಾದ ಆಹಾರ ಸೇವನೆ ಬೊಜ್ಜು ದೇಹಕ್ಕೆ ಕಾರಣವೆನ್ನಬಹುದು. ಇಲ್ಲಿ ಮಹಿಳೆ ಬೆಳಗಿನ ವಾಯುವಿಹಾರಕ್ಕೆ ಹೋಗಬೇಕೆಂದು ಆಲೋಚಿಸುತ್ತಾ ಗಿಡಗಳನ್ನು ಹಾಕಿ ಅಲಂಕಾರಕ್ಕೆ ಇಟ್ಟಿರುವ ಕುಂಡಗಳ ಪಕ್ಕದಲ್ಲಿ ಕುಳಿತಿರುವಂತಿದೆ. ಈ ಮಹಿಳೆಗೆ ಎದ್ದು ನಡೆದಾಡುವ ಸಾಮರ್ಥ್ಯ ಇಲ್ಲದಂತಾಗಿದೆ. ಎಂಬುದು ಇದರಿಂದ ತಿಳಿದುಬರುತ್ತದೆ.

ಈ ರೇಖಾಚಿತ್ರವು ೧೧/೧೫ ಇಂಚು ಆಳತೆಯನ್ನು ಹೊಂದಿದ್ದು. ೨೦೧೨ರಲ್ಲಿ ಮಾರ್ಕರ್ ಪೆನ್ನಿನಿಂದ ಪೇಪರ್ ಮೇಲೆ ರಚಿಸಿದ್ದಾರೆ.

ರೇಖಾಚಿತ್ರದಲ್ಲಿ ದಪ್ಪನ ಕಾಯದ ಮಹಿಳೆಯು ಕಟ್ಟೆಯ ಮೇಲೆ ಕುಳಿತ್ತಿದ್ದು, ರೇಖೆಗಳಿಂದ ಕಲಾಕೃತಿಯು ಪೂರ್ಣಗೊಂಡಿರುವುದು ಕಂಡುಬರುತ್ತದೆ. ಉಟ್ಟಿರುವ ಸೀರೆ ಅನೇಕ ರೇಖೆಗಳಿಂದ ಕೂಡಿದ್ದಾಗಿದೆ. ಇವರ ಎಡ ಮತ್ತು ಬಲ ಭಾಗದಲ್ಲಿ ಹೂವಿನ ಕುಂಡಗಳು ಕಾಣುತ್ತವೆ. ಅದರಲ್ಲಿ ಗಿಡದ ತುಂಬ ಹೂವುಗಳು ತುಂಬಿರುವುದು ಕಂಡುಬರುತ್ತವೆ.

**೭. ತರಕಾರಿ ಸೇವನೆಯಿಂದ ಆರೋಗ್ಯ ಸುಧಾರಿಸಿಕೊಳ್ಳಲು ಪ್ರಯತ್ನಿಸುತ್ತಿರುವ ಮಹಿಳೆ (ಸ್ಥೂಲ ಕಾಯದ ಮಹಿಳೆ)**

ಈ ಚಿತ್ರದಲ್ಲಿ ಮಹಿಳೆ ತನ್ನ ನೋವಿನ ಸಂಕಟವನ್ನು ತಾಳಲಾರದೆ ಆರೋಗ್ಯದ ಕಡೆ ಮುಖ ಮಾಡಿದಂತಿದೆ. ನಿಸರ್ಗಮಯವಾಗಿ ರೂಪಿತಗೊಂಡ ತರಕಾರಿಗಳ ಸೇವನೆ ಆರೋಗ್ಯಕ್ಕೆ ಉತ್ತಮ ಎಂಬ ವೈದ್ಯರ ಸಲಹೆಯ ಮೇರೆಗೆ ಅಡುಗೆ ಮನೆಯಲ್ಲಿ ಸ್ವತಃ ತರಕಾರಿಗಳ ಅಡುಗೆಯನ್ನು ಮಾಡಬೇಕೆಂದು ಬಯಸಿರುವುದಾಗಿದೆ. ಮನೆಗೆ ಕುರುಕಲು ಪದಾರ್ಥಗಳ ಬದಲು ತರಕಾರಿಗಳ ಪ್ರವೇಶವಾಗಿದೆ. ಪೌಷ್ಠಿಕಾಂಶಗಳನ್ನು ಹೊಂದಿರುವ ತರಕಾರಿಗಳ ಸೇವನೆಯಿಂದ ಹಲವಾರು ಕಾಯಿಲೆಗಳು ವಾಸಿಯಾಗುತ್ತವೆ. ಅಲ್ಲದೇ ನಿಮ್ಮ ಕೆಲಸವನ್ನು ನೀವೇ ಮಾಡಿ ಆರೋಗ್ಯವಾಗಿರಿ ಎಂಬ ಸಂದೇಶವನ್ನು ಅಂದಾನಿಯವರು ಅಂದವಾಗಿ ಚಿತ್ರಿಸಿದ್ದಾರೆ.

ಈ ರೇಖಾಚಿತ್ರವು ೧೧/೧೫ ಇಂಚು ಆಳತೆಯನ್ನು ಹೊಂದಿದ್ದು. ೨೦೧೩ರಲ್ಲಿ ಮಾರ್ಕರ್ ಪೆನ್ನಿನಿಂದ ಪೇಪರ್ ಮೇಲೆ ರಚಿಸಿದ್ದಾರೆ. ರೇಖಾಚಿತ್ರದಲ್ಲಿ ಸ್ಥೂಲಕಾಯದ ಮಹಿಳೆಯು ನಿಂತು ಹಲಸಿನ ಹಣ್ಣುಗಳನ್ನು ಕೊಂಡುಕೊಳ್ಳಲು ಬಂದಿದ್ದು, ಹಣ್ಣುಗಳನ್ನು ನೋಡುತ್ತಿರುವುದು ಇಲ್ಲಿ ಕಂಡುಬರುತ್ತವೆ. ದಪ್ಪ ಗಾತ್ರದ ಈ ಹೆಣ್ಣುಮಗಳು ಚೂಡಿದಾರವನ್ನು ಹಾಕಿಕೊಂಡು ನಿಂತಿರುವುದು. ಇಲ್ಲಿ ಎಲ್ಲಾ ಹೊರರೇಖೆಗಳಿಂದ ರಚಿಸಿದ್ದು ಕಂಡುಬರುತ್ತದೆ.

**೮. ತಾಯಿ ಮಗಳ ಸಂಭಾಷಣೆ (ಸ್ಥೂಲ ಕಾಯದ ಮಹಿಳೆ)**

ಈ ರೇಖಾಚಿತ್ರವು ೧೧/೧೫ ಇಂಚು ಆಳತೆಯನ್ನು ಹೊಂದಿದ್ದು, ಇದರಲ್ಲಿ ಮಾರ್ಕರ್ ಪೆನ್ನಿನಿಂದ ಪೇಪರ ಮೇಲೆ ರಚಿಸಿರುವುದನ್ನು ಕಾಣುತ್ತೇವೆ.

ಈ ರೇಖಾಚಿತ್ರದಲ್ಲಿ ಸ್ಥೂಲಕಾಯದ ಮಹಿಳೆ ಮತ್ತು ಅವಳ ಮೊಮ್ಮಗಳನ್ನು ಕಾಣುತ್ತೇವೆ. ಇಲ್ಲಿ ಅಜ್ಜಿಯು ತನ್ನ ಮೊಮ್ಮಗಳನ್ನು ಆಟ ಆಡಿಸುತ್ತಿರುವ ಸನ್ನಿವೇಶವನ್ನು ಕಾಣುತ್ತೇವೆ. ಇಲ್ಲಿ ರೇಖೆಗಳಿಂದ ಸಂಪೂರ್ಣವಾಗಿ ಪೂರ್ಣಗೊಂಡಿದ್ದು. ಮೊಮ್ಮಗಳ ಕೈಯಲ್ಲಿ ಆಟದ ಸಾಮಾನುಗಳನ್ನು ಹಿಡಿದು. ಅಜ್ಜಿಯ ಜೊತೆ ಮಾತನಾಡುತ್ತಿರುವುದನ್ನು ಕಾಣುತ್ತೇವೆ.

ಈ ಚಿತ್ರದಲ್ಲಿ ಬೊಜ್ಜುದೇಹದ ಮಹಿಳೆಯು ಮಂಚದ ಮೇಲೆ ಕುಳಿತಿದ್ದಾಳೆ. ಶಾಲೆಯಿಂದ ಮನೆಗೆ ಬಂದ ಮಗುವು ತಾಯಿಗೆ ಮನೆಯ ಹೊರಗಡೆ ಆಟಿಕೆ ಸಾಮಾನುಗಳು ಬಂದಿರುವ ಬಗ್ಗೆ



1. ಸ್ಥೂಲ ಕಾಯದ ಮಹಿಳೆ, ಜಲವರ್ಣ



2. ಸ್ಥೂಲ ಕಾಯದ ಮಹಿಳೆ, ಜಲವರ್ಣ 1989



3. ಸ್ಥೂಲ ಕಾಯದ ಮಹಿಳೆ, ಜಲವರ್ಣ 1985



ಸ್ಥೂಲ ಕಾಯದ ಮಹಿಳೆ, ಜಲವರ್ಣ 1985



4. ಬೆಮ್ಮ ಉಜ್ಜಿಕೊಳ್ಳು ಪ್ರಯತ್ನಿಸುತಿರುವ ಮಹಿಳೆ, ಜಲವರ್ಣ 1985



1. ನಡೆದಾಡಲು ಪ್ರಯತ್ನಿಸುತಿರುವ ಮಹಿಳೆ,



2. ಸೋಫಾದ ಮೇಲೆ ಕುಳಿತಿರುವ ಮಹಿಳೆ ಮಾರ್ಕರ ಪೆನ್ನು 11x15



3. ಅನಾರೋಗ್ಯದ ಕಡೆಗೆ, ಮಾರ್ಕರ 2003



4. ಮಂಚದ ಜೋಕಾಲಯ ಮೇಲೆ ಕುಳಿತ ಮಹಿಳೆ, 1993



5. ಗೆಳತಿಯರ ನಡುವೆ ಚರ್ಚೆ, 11x15 2012



6. ಬೆಳಗ್ಗೆ ಎದ್ದು ವರಾಂಡದಲ್ಲಿ ಕುಳಿತಿರುವ ಮಹಿಳೆ 2012



7. ಸ್ಥೂಲ ಕಾಯದ ಮಹಿಳೆ, 11x15 2013



8. ತಾಯಿ ಮಗಳ ಸಂಭಾಷಣೆ

ತಿಳಿಸುವಂತಿದೆ. ಮಗುವಿನ ಮಾತನ್ನು ತಾಯಿ ಆಲಿಸುತ್ತಿರುವ ದೃಶ್ಯ ಇದಾಗಿದೆ. ದಪ್ಪ ದೇಹದ ಈಕೆ ನಡೆದಾಡುವುದು ಕಷ್ಟ. ಅವಳು ಹೊರಗಡೆ ಹೋಗಬೇಕಾದರೆ ಎತ್ತಿನಗಾಡಿಯನ್ನು ಬಳಸಬೇಕಾಗುತ್ತದೆ. ಎಂಬ ಸಂದೇಶ ಇದರಲ್ಲಿದೆ. ದೇಹದ ಅತಿಯಾದ ಬೆಳವಣಿಗೆ ಅನೇಕ ಸಮಸ್ಯೆಗಳಿಗೆ ದಾರಿ ಮಾಡಿಕೊಡುತ್ತದೆ ಎಂಬುದು ಇದರ ತಿರುಳಾಗಿದೆ.

### ೪.೭. ವಸಂತ ಸರಣಿ ಚಿತ್ರಗಳು

**೧. ವಸಂತ**

ಪೇಪರ್ ಮೇಲೆ ಜಲವರ್ಣದಿಂದ ರಚಿಸಲ್ಪಟ್ಟಿರುವ ಈ ಕಲಾಕೃತಿಯಲ್ಲಿ ಹೆಚ್ಚಾಗಿ ಪ್ರಮುಖ ವರ್ಣ ಬಳಕೆಯಾಗಿರುವುದನ್ನು ಗಮನಿಸಬಹುದು. ನೀಲಿ ವರ್ಣದ ಬಳಕೆ ಅಧಿಕ ವಾಗಿರುವುದರಿಂದ ಪ್ರಖರತೆ ಇನ್ನೂ ಹೆಚ್ಚಾಗಿ ತೋರುತ್ತಿದೆ. ವಸಂತನ ಆಗಮನದ ಹಿನ್ನೆಲೆಯ ಕೃತಿಯಾಗಿರುವುದರಿಂದ ಮರ ಚಿಗುರೊಡೆಯುತ್ತಿರುವಂತೆ. ಎಲೆಗಳಿಗೆ ಹಸಿರು ವರ್ಣದ ಲೇಪನ ಮಾಡಿದ್ದಾರೆ. ಪ್ರಕೃತಿಯ ಕೂಸಾಗಿರುವ ಪ್ರತಿಯೊಂದು ಜೀವಿಯು ಹೊರತಾಗಿಲ್ಲವೆನ್ನುವಂತಹ ಸಕಲ ಜೀವರಾಶಿಗೆ ಪ್ರಕೃತಿಯೋ ಎನ್ನುವಂತೆ. ಚಿಟ್ಟೆ, ಮೀನು, ಮನುಷ್ಯ ಇತ್ಯಾದಿ ಆಕೃತಿಗಳನ್ನು ಬಳಸಿಕೊಂಡು ಸಂಯೋಜಿಸಿದ್ದಾರೆ.

ಆಧುನಿಕತೆ ಎಷ್ಟೇ ಮುಂದುವರಿದರೂ ಪ್ರಕೃತಿಯ ನಿಯಮವನ್ನು ಉಲ್ಲಂಘಿಸಲು ಸಾಧ್ಯವಿಲ್ಲ ಎಂಬುದಕ್ಕೆ ಈ ಚಿತ್ರ ಉದಾಹರಣೆಯಾಗಿದೆ. ಜಾಗತೀಕರಣದ ಪ್ರಭಾವಕ್ಕೆ ಸಿಲುಕಿದ ಇಂದಿನ ಮಾನವ ಪ್ರಕೃತಿ ಸಹಜವಾಗಿ ಇರಲೇಬೇಕು ಎಂಬುದನ್ನು ಈ ಚಿತ್ರದಲ್ಲಿ ಕಾಣಬಹುದು. ಸ್ತ್ರೀ ಪುರುಷರ ಸಮಾಗಮ ಒಂದು ಹೊಸ ಕನಸನ್ನು ಹೊಂದಿರುತ್ತದೆ. ಆ ಕನಸನ್ನು ಸಾಕಾರಗೊಳಿಸಲು ಪ್ರಕೃತಿಯ ಸಹಕಾರ ಅಗತ್ಯವಿದೆ. ಅದರ ಮೂಲಕ ಆಕಾಶದೆತ್ತರಕ್ಕೆ ಏರಬಹುದು. ಇಲ್ಲಿ ಮಹಿಳೆಯು ಎಲ್ಲಾ ತೊಂದರೆಗಳನ್ನು ಅನುಭವಿಸುತ್ತಾ ವಿಶಾಲ ಹೃದಯವನ್ನು ಹೊಂದಿರುತ್ತಾಳೆ. ಆ ಮಹಿಳೆಯನ್ನು ನೋಡಿದ ಪುರುಷ ಅವಳ ಪಾಲಿಗೆ ವೃಫ್ರನಾಗುತ್ತಾನೆ ಎನ್ನುವ ಸಂದೇಶವು ಇದರಲ್ಲಿದೆ. ಮದುವೆಯಾದ ವಧು ವರರು ಮೊದಲನೆಯ ರಾತ್ರಿ ಸಂಭ್ರಮಿಸುವ ಸಂದರ್ಭದ ಚಿತ್ರ ಇದಾಗಿದೆ. ಕೆಂಪು ಬಣ್ಣದ ಹಾಸಿಗೆ ಬೆಡ್‌ಶೀಟಿನ ಮೇಲೆ ಮಲಗಿರುವುದು ಕಂಡುಬರುತ್ತದೆ. ಇವರ ಈ ದಿನದ ಕನಸು ನನಸಾಗಲು ಪ್ರಕೃತಿ ನಿಯಮ ಅನುರಿಸಬೇಕು ಎಂದಾಗಿದೆ.

**೨. ವಸಂತ**

೧೯೭೮ರಲ್ಲಿ ತೈಲವರ್ಣದಲ್ಲಿ ರಚಿತಗೊಂಡಿರುವ ಈ ಚಿತ್ರ ವಸಂತಮಾಸದಲ್ಲಿ ಮಾವು ಚಿಗುರಿದ ಸ್ವರೂಪವನ್ನು ಬಿಂಬಿಸುವಂತಿದೆ. ನಿಸರ್ಗದ ನಿಯಮವನ್ನು ಯಾರೂ ಅಲ್ಲಗಳೆಯುವಂತಿಲ್ಲ. ಪರಸ್ಪರ ಹೆಣ್ಣು ಗಂಡು ಕೂಡಿದರೆ ಹೊಸ ಸಂತಾನ ಸೃಷ್ಟಿಯಾದಂತೆ ವಸಂತಮಾಸದ ಸಮಯದಲ್ಲಿ ಪ್ರಕೃತಿಯು ಹೊಸರೀತಿಯಲ್ಲಿ ಸೃಷ್ಟಿಯಾಗುತ್ತದೆ. ಮದುವಣಗಿತ್ತಿಯಂತೆ ಶೋಭಿಸುತ್ತದೆ. ಹಾಗೆಯೇ ಈ ಚಿತ್ರದಲ್ಲಿ ಯೌವ್ವನದ ಗಂಡು ಹೆಣ್ಣಿನ ಚಿತ್ರಗಳ ಮೂಲಕ ಸಾಂಕೇತಿಕವಾಗಿ ಸೂಚಿಸಲಾಗಿದೆ. ಯಾವುದೇ ಹೊಸದನ್ನು ಸೃಷ್ಟಿಸಲು ಕಾಲ ಬಹಳ ಮುಖ್ಯ. 'ಕಾಲಾಯ ತಸ್ಮೈ ನಮಃ' ಎಂಬಂತೆ ಎಲ್ಲವನ್ನೂ




1. ವಸಂತ ಜಲವರ್ಣ



2. ವಸಂತ ತೈಲವರ್ಣ

ಕಾಲವೇ ನಿರ್ಧರಿಸುತ್ತದೆ. ಯಾವ ಯಾವ ಕಾಲಘಟ್ಟದಲ್ಲಿ ಏನೇನು ನಡೆಯಬೇಕೋ ಅವೆಲ್ಲವೂ ನಡೆಯಲೇಬೇಕು. ಏಕೆಂದರೆ ಅದು ಪ್ರಕೃತಿಯ ನಿಯಮ. ಯಾರೂ ನಿಸರ್ಗದ ನಿಯಮಕ್ಕೆ ವಿರುದ್ಧವಾಗಿ ನಡೆಯಲು ಸಾಧ್ಯವಿಲ್ಲ ಎಂಬುದನ್ನು ಈ ಚಿತ್ರ ನೆನಪಿಸುತ್ತದೆ.

## ೪.೮. ವೈಭವ ಸರಣಿ ಚಿತ್ರಗಳು

### ಚರಿತ್ರೆ

ಪ್ರತಿಯೊಂದು ಪ್ರದೇಶವು ತನ್ನದೆಯಾದ ಚರಿತ್ರೆಯನ್ನು ಹೊಂದಿರುತ್ತದೆ. ಆ ಚರಿತ್ರೆಯನ್ನು ತಿಳಿಸಿದಾಗ ಮಾತ್ರ ಅದರ ಮಹತ್ವ ಹೆಚ್ಚಾಗುತ್ತದೆ. ಚರಿತ್ರೆ ಬರವಣಿಗೆಯಲ್ಲಿ ದಾಖಲಾಗಿದೆ ಅಂಚಿನಲ್ಲಿರುವ ನಿರ್ಲಕ್ಷ್ಯಕ್ಕೊಳಗಾಗಿರುವ ಸಂಗತಿಳನ್ನು ಚಿತ್ರಕಲೆಯ ಮೂಲಕ ಚರಿತ್ರೆಯನ್ನು ದಾಖಲಿಸುವ ಪ್ರಯತ್ನವನ್ನು ಅಂದಾನಿಯವರು ಮಾಡಿದ್ದಾರೆ. ಚರಿತ್ರೆಯ ಆಕರಗಳಾಗಿ ಕಂಡುಬರುವ ಕೋಟೆ ಕೊತ್ತಲು, ಶಿಲಾ ಶಾಸನಗಳು, ವೀರಗಲ್ಲು, ಮಾಸ್ತಿಕಲ್ಲು ಮತ್ತು ತಾಮ್ರಶಾಸನ ಮುಂತಾದವುಗಳನ್ನು ಚಿತ್ರಕಲೆಯಲ್ಲಿ ಬಿಡಿಸಿದ್ದಾರೆ. ಪ್ರಭುತ್ವದ ವೈಭವವನ್ನು ಕುರಿತು ವಿವರಿಸುವ ಮಾಹಿತಿಯನ್ನು ನೀಡುವ ಸಂಗತಿಗಳನ್ನು ತಿಳಿಸಲು ಪ್ರಯತ್ನಿಸಿದ್ದಾರೆ. ಇದು ಚರಿತ್ರೆಯ ಮೇಲೆ ಹೊಸ ಬೆಳಕನ್ನು ಚೆಲ್ಲಿದಂತಾಗುತ್ತದೆ. ಏಕೆಂದರೆ ಕಾಲ ಚಕ್ರದಲ್ಲಿ ಸಿಲುಕಿದ ಅವಶೇಷಗಳು ನಶಿಸಿ ಹೋಗುತ್ತದೆ. ನಶಿಸಿದ ನಂತರ ಅದರ ಪೂರ್ಣ ಸ್ವರೂಪ ಇಲ್ಲದಂತಾಗುತ್ತದೆ. ಅಂತಹ ಸಂದರ್ಭದಲ್ಲಿ ಸ್ಮಾರಕಗಳ ಹಿಂದಿನ ಚಿತ್ರಣವನ್ನು ಅವಲೋಕಿಸಲು ಅಂದಾನಿಯವರು ಚಿತ್ರಕಲೆ ಸಹಕಾರಿಯಾಗುತ್ತದೆ. ಉದಾಹರಣೆ ಹಂಪಿಯ ವಿಜಯ ವಿಠ್ಠಲ ದೇವಾಲಯದ ಆವರಣದಲ್ಲಿರುವ ಕಲ್ಲಿನ ರಥಕ್ಕೆ ಹಿಂದೆ ಶಿಖರವಿತ್ತಂತೆ. ಆದರೆ ಅದು ಇಂದಿಲ್ಲ ಇದನ್ನು ಗಮನಿಸಬೇಕಾದರೆ ಹಳೆಯ ಕಾಲದ ಚಿತ್ರಕಲೆಯನ್ನು ನೋಡಬೇಕಾಗುತ್ತದೆ. ಅಂದಾಗ ವಾಸ್ತವ ಚಿತ್ರಣ ತಿಳಿಯುತ್ತದೆ. ಈ ಹಿನ್ನೆಲೆಯಲ್ಲಿ ಅಂದಾನಿಯವರು ತಮ್ಮ ಪರಿಸರದಲ್ಲಿ ಕಂಡುಬರುವ ಸ್ಮಾರಕಗಳನ್ನು ರಕ್ಷಿಸುವ ಇತಿಹಾಸದ ವಿದ್ಯಾರ್ಥಿಗಳು ಆಸಕ್ತಿಯನ್ನು ಹೆಚ್ಚಿಸುವ ವಸ್ತುಸ್ಥಿತಿಯನ್ನು ತಿಳಿಯಲು ಮಾಧ್ಯಮಗಳ ಆಗತ್ಯವಿದೆ. ಆದರೆ ಸದ್ಯಕ್ಕೆ ಚಾಲ್ತಿಯಲ್ಲಿರುವುದು ಚಿತ್ರಕಲೆ ಇದರ ಮೂಲಕವೇ ಚರಿತ್ರೆಯ ಆಸಕ್ತರನ್ನು ಗಮನ ಸೆಳೆಯುವ ಪ್ರಯತ್ನವನ್ನು ಅಂದಾನಿಯವರು ಮಾಡಿರುವುದು ಗಮನಾರ್ಹ.

### ೧. ನಶಿಸಿ ಹೋಗುತ್ತಿರುವ ಶಾಸನಗಳನ್ನು ರಕ್ಷಿಸುವುದು (ವೈಭವ)

೨೦/೩೦ ಅಳತೆಯ ಈ ಕಲಾಕೃತಿಯನ್ನು ಮಿಶ್ರಮಾಧ್ಯಮದಲ್ಲಿ ರಚಿಸಿದ್ದಾರೆ. ಕಪ್ಪು, ಬಿಳಿ ಮತ್ತು ಕಪ್ಪು ಮಿಶ್ರತ ನೀಲಿ ಬಣ್ಣದ ಸಂಯೋಜನೆ ಹೊಂದಿರುವು ಕೃತಿಯಲ್ಲಿ ಶಾಸನ ಮಾದರಿಯಂತೆ ಕಂಡುಬರುತ್ತಾರೆ. ಆಯತ, ಚೌಕ, ತ್ರಿಕೋನ, ಷಟ್‌ಕೋನ ಮಾದರಿಯಂತೆ ಆಕೃತಿಗಳನ್ನು ಸೃಷ್ಟಿಸಲಾಗಿದೆ. ಮೂರ್ತಕ್ಕೆ ಅಮೂರ್ತದ ಮಾದರಿಯಲ್ಲಿ ತಮ್ಮ ಕಲ್ಪನೆಗಳಿಗೆ ರೂಪುನೀಡಿದ್ದಾರೆ. ನಿರ್ಲಕ್ಷಕ್ಕೆ ಒಳಗಾಗಿರುವ ಶಾಸನಗಳಂತೆ ತೋರುತ್ತಿವೆ.

ಕಾಲಚಕ್ರದಲ್ಲಿ ಸಿಲುಕಿದ ಯಾವುದೇ ಅವಶೇಷವು ನಶಿಸಿ ಹೋಗುತ್ತದೆ. ಇದರಲ್ಲಿ ಶಾಸನಗಳಂತಹ ಪ್ರಮುಖ ಅವಶೇಷಗಳನ್ನು ನಶಿಸದಂತೆ ರಕ್ಷಿಸುವುದು ಪ್ರತಿಯೊಬ್ಬರ ಕರ್ತವ್ಯವಾಗಿದೆ. ಅವು ಚರಿತ್ರೆಯ

ಗತವೈಭವವನ್ನು ಸಾರುತ್ತವೆ. ಅವುಗಳನ್ನು ಅಧ್ಯಯನ ಮಾಡುವುದು ಅವಶ್ಯವಾಗಿದೆ ಎಂದು ಈ ಚಿತ್ರದ ಮೂಲಕ ತಿಳಿಸಲಾಗಿದೆ. ಶಾಸನಗಳು ಯಾವ ಕಾರಣಗಳಿಂದಾಗಿ ನಾಶಹೊಂದುತ್ತಿವೆ ಎಂಬುದುದನ್ನೂ ಇಲ್ಲಿ ಸಾಂಕೇತಿಕವಾಗಿ ಬಿಂಬಿಸಲಾಗಿದೆ.

**೨. ಅಪಾಯಕಾರಿ ಶಾಸನಗಳು (ವೈಭವ)**

ಈ ಚಿತ್ರದಲ್ಲಿ ಕಂಡುಬರುವ ಶಾಸನಗಳು ಯುದ್ಧಗಳನ್ನು ಕುರಿತು ತಿಳಿಸುತ್ತವೆ. ಅಪಾರ ಸಾವು ನೋವುಗಳನ್ನು ಕುರಿತ ವಿವರ ಇಲ್ಲಿದೆ. ಬದುಕಿನ ಬವಣೆಯನ್ನು ನೀಗಿಸಲು ಯುದ್ಧಗಳು ಅಡ್ಡಗಾಲಾಗಿ ಪರಿಣಮಿಸಿದವು. ಮಹಿಳೆಯ ಮೇಲಿನ ವ್ಯಾಮೋಹವು ಸಹ ಇದರಲ್ಲಿ ಉಲ್ಲೇಖಗೊಂಡಿದೆ. ಒಟ್ಟಾರೆ ಯುದ್ದಗಳು ಜನಸಾಮಾನ್ಯರಿಗೆ ಅಪಾಯಕಾರಿಯಾಗಿದ್ದವೆಂಬುದನ್ನು ಸೂಚಿಸಲಾಗಿದೆ.

**೩. ಸಂಕೀರ್ಣ ಶಾಸನಗಳು (ವೈಭವ)**

೪/೪ ಅಡಿ ಅಳತೆಯ ಪೇಪರನ ಅವಕಾಶದಲ್ಲಿ ಪೆನ್ಸಿಲ್ ಮಾಧ್ಯಮದಿಂದ ರಚಿಸರುವಂತಹದ್ದಾಗಿದೆ. ಹಿನ್ನೆಲೆಯಲ್ಲಿ ತೆಳುವಾದ ಕಂದುಗೆಂಪು ವರ್ಣವನ್ನು ಹೊಂದಿದ್ದು, ಅದರ ಮೇಲೆ ಈ ಪೆನ್ಸಿಲ್‌ನಿಂದ ತಮ್ಮ ಭಾವಾಭಿವ್ಯಕ್ತಿಯ ಸಂಯೋಜನೆಯನ್ನು ಮಾಡಿದ್ದು ನೆರಳು ಬೆಳಕಿನ ಆಯಾಮನ್ನು ಪಡೆದುಕೊಂಡಿದೆ.

ಶಾಸನಗಳನ್ನು ವಿರಗಲ್ಲು, ಮಾಸ್ತಿಗಲ್ಲುಗಳ ಮೇಲೆ, ಧೂಪದೀಪಕ್ಕೆಂದು ನಿಲ್ಲಿಸಿದ ಗರುಡಗಂಬದಲ್ಲೂ ಶಾಸನಗಳನ್ನು ಕೆತ್ತಿಸಲಾಗುತಿತ್ತು. ನೀರಾವರಿ ವ್ಯವಸ್ಥೆಯನ್ನು ಸೂಚಿಸುವ ಕೆರೆಕಟ್ಟೆಗಳು, ಅಣೆಕಟ್ಟುಗಳನ್ನು ನಿರ್ಮಿಸಿರುವುದು, ಅರಮನೆ, ಮೈದಾನ, ವೈಭವೀಕರಣದ ಚಿತ್ರ, ಜಲಸಂಪತ್ತಿನಿಂದ ಕೂಡಿದ ಫಲವತ್ತಾದ ಭೂಮಿಯನ್ನು ಕೃಷಿಗೆ ಒಳಪಡಿಸಲಾಗುತ್ತಿತ್ತು. ಹೆಚ್ಚುವರಿ ಉತ್ಪಾದನೆ ನಗರೀಕರಣಕ್ಕೆ ಕಾರಣವಾಯಿತು ಎಂಬುದು ತಿಳಿದುಬರುವ ಸಂಗತಿ. ಹಂತಹಂತವಾಗಿ ನಶಿಸಿಹೋಗುವುದನ್ನು ತಪ್ಪಿಸಲು ಪ್ರಯತ್ನ ಮಾಡಬೇಕೆಂದು ಈ ಚಿತ್ರದಲ್ಲಿ ಸೂಚಿಸಲಾಗಿದೆ.

**೪. ಸತಿ ಪದ್ಧತಿ (ವೈಭವ)**

೨೦/೩೦ ಅಳತೆಯ ಪೇಪರ್ ಮೇಲೆ ಪೆನ್ಸಿಲ್ ಮಾಧ್ಯಮದಿಂದ ರಚನೆಯಾದ ಈ ಕಲಾಕೃತಿಯು ಕಪ್ಪು ಬಿಳುಪಿನಲ್ಲಿ ನೆರಳು ಬೆಳಕನ್ನು ಪ್ರಧಾನಾವಾಗಿ ರಚಿಸಲಾಗಿದೆ. ಪೆನ್ಸಿಲ್‌ನ ಚಿಕ್ಕ ಎಳೆತಗಳನ್ನು ಎಳೆದು ಕೃತಿಯನ್ನು ಪೂರ್ಣಗೊಳಿಸಲಾಗಿದೆ.

ಗಂಡ ಸತ್ತರೆ ಹೆಂಡತಿ ಸತಿ ಪದ್ಧತಿಯನ್ವಯ ಮರಣ ಹೊಂದುತ್ತಿದ್ದಳು. ಸತಿ ಪದ್ಧತಿ ಅಸ್ತಿತ್ವದಲ್ಲಿತ್ತು ಎಂಬುದನ್ನು ಕುರಿತು ಶಾಸನಗಳನ್ನು ದಾಖಲಿಸಿರುವುದನ್ನು ಚಿತ್ರಿಸಲಾಗಿದೆ. ಇದು ಮಹಿಳೆಯ ಶೋಷಣೆಯ ಕ್ರಮಗಳಲ್ಲಿ ಒಂದು. ಈ ಬಗೆಯ ವಿವರಗಳನ್ನು ಶಾಸನಗಳು ಸ್ಪಷ್ಟವಾಗಿ ಉಲ್ಲೇಖಿಸಿವೆ ಎಂಬ ಸಂದೇಶ ನೀಡಲಾಗಿದೆ.

### ೫. ಕಲ್ಲಿನ ಮೇಲಿರುವ ಶಾಸನಗಳು (ವೈಭವ)

೩/೨೧/೨ ಅಡಿ ಅಳತೆಯ ಈ ರೇಖಾಚಿತ್ರದಲ್ಲಿ ಕಪ್ಪು ಬಣ್ಣದ ಕ್ರಯಾನ್ಸ್‌ನಿಂದ ರಚಿಸಿರುವಂತದ್ದಾಗಿದೆ. ಇದೂ ಕೂಡ ಶಾಸನಗಳ ಮಾದರಿಯನ್ನು ನಿರೂಪಿಸುವಂತಿದೆ. ಈ ಕಲಾಕೃತಿಯಲ್ಲಿ ಯಾವುದೇ ನಿರ್ದಿಷ್ಟ ರೇಖೆಗಳು ಗೋಚರಿಸುವುದಿಲ್ಲವಾದರೂ ರೇಖೆಗಳನ್ನು ಘನೀಕರಿಸಿ ರಚಿಸಿರುವಂತೆ ಕ್ರಯಾನ್ಸ್‌ನ್ನು ಸಂಪೂರ್ಣ ಕಪ್ಪು ಬಿಳುವು ವಿಧಾನದಿಂದ ಕೃತಿಯನ್ನು ಪೂರ್ಣಗೊಳಿಸಿದ್ದಾರೆ.

### ೬. ಪ್ರೀತಿಗಾಗಿ ಶಾಸನಗಳನ್ನು ಹಾಕಿಸಿರುವುದು (ವೈಭವ)

ಅದೆಷ್ಟೋ ಅರಸರು, ಸಾಮಂತರು ಅಧಿಕಾರಿಗಳು ಮುಂತಾದವರು ತಮ್ಮ ಪ್ರೇಮ ನಿವೇದನೆಗಾಗಿ ಶಾಸನಗಳನ್ನು ಹಾಕಿಸಿದ್ದಾರೆ. ಅದರ ಹಿಂದೆ ಕಾಣದ ಕೈಗಳ ಪಾತ್ರ ಸಾಕಷ್ಟಿದೆ. ಮಹಿಳೆಯನ್ನು ತಮ್ಮತೆಕ್ಕೆಗೆ ತೆಗೆದುಕೊಳ್ಳಬೇಕೆಂಬ ವಾಂಚೆ ಅಧಿಕವಾಗಿತ್ತು. ಅಂದು ಪ್ರೇಮ ಪತ್ರಗಳನ್ನು ಪಾರಿವಾಳಗಳ ಮೂಲಕ ತಮ್ಮ ಪ್ರೇಮಿಗಳಿಗೆ ಕಳುಹಿಸುವ ಪರಂಪರೆಯನ್ನು ಈ ಚಿತ್ರ ನೆನಪಿಸುತ್ತದೆ. ಈ ಬಗೆಯಲ್ಲಿ ಎಷ್ಟೋ ಜನರು ತಮ್ಮ ಪತ್ರ ಬರೆದಿರುವುದನ್ನು ಗಮನಿಸಬಹುದಾಗಿದೆ. ಪ್ರಸ್ತುತ ಕಲಾಕೃತಿಯಲ್ಲಿ ರಣಹದ್ದಿನಂತೆ ಕಾಣುವ ಪಾರಿವಾಳವು ರೆಕ್ಕೆಬಿಚ್ಚಿ ಹಾರಿಹೋಗುತ್ತಲಿದೆ. ಕೆಳಗೆ ಶಾಸನದ ಕಲ್ಲಿನಿಂದ ಉದ್ಭವಿಸಿದ ವ್ಯಕ್ತಿಯೊಬ್ಬ ಅನೇಕ ಕೈಗಳನ್ನು ಮೇಲೆ ಚಾಚಿ ಪ್ರೇಮ ನಿವೇದನೆ ಮಾಡುತ್ತಿರುವಂತೆ ಇದೆ. ಪಕ್ಕದಲ್ಲಿ ಮಹಿಳೆಯೊಬ್ಬಳು ಕೈಗಳನ್ನು  ಮೇಲಕ್ಕೆ ಮಾಡಿ ಹಾರುವಂತಿದೆ. ಮತ್ತೊಂದು ದೃಷ್ಟಿಕೋನದಲ್ಲಿ ರಣಹದ್ದಿನಂತಹ ದುಷ್ಟರಿಂದಾಗಿ ಶಾಸನಗಳು ಹಾಳಾಗುತಿವೆ. ಅದಕ್ಕಾಗಿ ಶಾಸನ ಕಲ್ಲುಗಳೇ ತಮ್ಮನ್ನು ತಮ್ಮನ್ನು ರಕ್ಷಿಸಿರಿ ಎಂದು ಕೇಳಿಕೊಳ್ಳುತ್ತಿರುವಂತೆ ಇಲ್ಲಿ ಚಿತ್ರಿಸಲಾಗಿದೆ.

ಈ ಪ್ರದೇಶದಲ್ಲಿ ಹೇರಳವಾಗಿ ದೊರೆಯುವ ಕಲ್ಲುಗಳ ಮೇಲೆಯೇ ಹೆಚ್ಚಿನ ಪ್ರಮಾಣದಲ್ಲಿ ಶಾಸನಗಳನ್ನು ಕೆತ್ತಿಸಲಾಗಿದೆ. ಕೋಟೆ, ಕೊತ್ತಲ, ಅರಮನೆ, ರಾಜ್ಯ, ಪರಿಸರ, ಅಲ್ಲಿನ ಸಾಮಾಜಿಕ, ಆರ್ಥಿಕ, ರಾಜಕೀಯದ ಜೊತೆಗೆ ಧಾರ್ಮಿಕ ಅಂಶಗಳನ್ನು ಪ್ರಧಾನವಾಗಿ ಚರ್ಚಿಸಿರುವ ಈ ಶಾಸನಗಳನ್ನು ಲಭ್ಯವಿರುವ ವಿವಿಧ ಗಾತ್ರದ ಕಲ್ಲುಗಳ ಮೇಲೆ ಕೆತ್ತಿರುವುದು ಕಂಡುಬರುತ್ತದೆ. ಅವುಗಳನ್ನು ಒಂದೆಡೆ ಸಂಗ್ರಹಿಸಿ ಕಾಪಾಡುವುದು ಮುಖ್ಯವೆಂಬ ಸಂದೇಶ ನೀಡಲಾಗಿದೆ.

### ೭. ಹಾಳಾಗುತ್ತಿರುವ ತಾಮ್ರ ಶಾಸನ (ವೈಭವ)

ಈ ಚಿತ್ರದಲ್ಲಿ ತಾಮ್ರ ಪತ್ರದಲ್ಲಿ ಹೊರಡಿಸಿದ ಶಾಸನವನ್ನು ಚಿತ್ರಿಸಲಾಗಿದೆ. ಹಲವಾರು ಸಂಗತಿಗಳನ್ನು ಪರಿಚಯಿಸುವ ಈ ಬಗೆಯ ಶಾಸನಗಳು ಮರೆಯಾಗುತ್ತಿರುವುದನ್ನು ಸೂಚಿಸಲಾಗಿದೆ. ತಾಮ್ರಪಟ ಶಾಸನಗಳ ರಚನೆ ಒಂದು ವಿಶಿಷ್ಠ ಕಲೆ. ತಾಮ್ರವನ್ನು ತಮಗೆ ಬೇಕಾದಂತೆ ಫಲಕಗಳಾಗಿ ಮಾಡಿಕೊಂಡು ಅದರ ಮೇಲೆ ಅಕ್ಷರಗಳನ್ನು ರೇಖಿಸುತ್ತಾರೆ. ಅಕ್ಷರಗಳು ತಗ್ಗಾಗಿರುವಂತೆ ನೋಡಿಕೊಳ್ಳುವುದು ಇಲ್ಲಿ ಗಮನಾರ್ಹ ನಂತರ ಅವುಗಳ ತುದಿಗಳಿಗೆ ರಂಧ್ರಗಳು ಹಾಕಿ ತಂತಿ ಅಥವಾ ಚೈನುಗಳಿಂದ ಬಂಧಿಸಲಾಗುತ್ತದೆ. ಇಂತಹ ಕಲಾತ್ಮಕ ಶಾಸನಗಳನ್ನು ಇಲ್ಲಿ ಚಿತ್ರಿಸಲಾಗಿದೆ.



1. ವೈಭವ ಮಿಶ್ರಮಾಧ್ಯಮ 20x30



2. ಅಪಾಯಕಾರಿ ಶಾಸನಗಳು ಮಿಶ್ರಮಾಧ್ಯಮ



3. ಸಂಕೀರ್ಣ ಶಾಸನ ಮಿಶ್ರಮಾಧ್ಯಮ 4x4

### ೮. ಶಾಸನಗಳ ವಿವಿಧ ಬಗೆಯ ಮಾದರಿ (ವೈಭವ)

ಈ ಚಿತ್ರದಲ್ಲಿ ಚರಿತ್ರೆಯನ್ನು ಕುರಿತು ತಿಳಿಸುವ ಮಹತ್ವದ ಆಕರಗಳಾದ ಶಾಸನಗಳನ್ನು ಕುರಿತು ಚಿತ್ರ ಬಿಡಿಸಿರುವುದನ್ನು ಗಮನಿಸಬಹುದಾಗಿದೆ. ಆಯಾಪ್ರದೇಶದ ಚರಿತ್ರೆಯ ಮಾಹಿತಿಯನ್ನು ನೀಡುವ ಈ ಶಾಸನಗಳನ್ನು ಕಲ್ಲಿನ ಮೇಲೆ ಕೆತ್ತಲಾಗಿದೆ. ಶಾಸನಗಳು ಕಂಬ, ತಲೆಬಾಗಿಲು, ನಿಡುಗಲ್ಲು, ಒಳಕಲ್ಲು ಮುಂತಾದ ಪ್ರಕಾರಗಳಲ್ಲಿ ಕೆತ್ತಿಸುತ್ತಿದ್ದರು. ರಾಜಪ್ರಭುತ್ವ ವ್ಯವಸ್ಥೆಯನ್ನು ಮುಂದಿನ ಪೀಳಿಗೆಗೆ ತಿಳಿಸಲು ಚಿತ್ರಕಲೆಯೇ ಅದಕ್ಕೆ ಸಹಕಾರ ನೀಡುತ್ತದೆ ಎಂಬುದನ್ನು ತಮ್ಮ ಕಲೆಯ ಮೂಲಕ ಸಾಬೀತುಪಡಿಸಲು ಪ್ರಯತ್ನಿಸಲಾಗಿದೆ.

### ೪.೯. ಆಟದ ಸರಣಿಯ ಚಿತ್ರಗಳು

### ೧ ಗ್ರಾಮೀಣ ಕ್ರೀಡೆಗಳು

ಈ ಕಲಾಕೃತಿಯು ೧೫/೨೨ ಇಂಚು ಆಳತೆಯನ್ನು ಹೊಂದಿದ್ದು. ಟೆಂಪರಾ ವರ್ಣಳಿಂದ ರೈಸ್ ಪೇಪರ್ ಮೇಲೆ ರಚಿಸಿದ್ದಾರೆ. ಕಲಾಕೃತಿಯಲ್ಲಿ ಅನೇಕ ಚಿಕ್ಕ ಚಿಕ್ಕ ಮಕ್ಕಳು ಆಟ ಆಡುತ್ತಿರುವ ಸನ್ನಿವೇಶವನ್ನು ನೋಡಬಹುದು ಹಾರುತ್ತಿರುವ ಜನರು ಲಾಗಟಿ ಹೊಡೆಯುತ್ತಿರುವ ಮುಟ್ಟಾಟ ಆಡುತ್ತಿರುವುದು ಕಂಡುಬರುತ್ತದೆ. ಇಲ್ಲಿ ತೆಳುವಾದಂತಹ ನೀಲಿ ಹಳದಿ ಕೆಂಪು ಕಪ್ಪು ಟಿಂಪರ್ ಬಣ್ಣಗಳನ್ನು ಬಳಸಿಕೊಂಡು ಕಲಾಕೃತಿಯನ್ನು ರಚಿಸಲಾಗಿದೆ.

ಗ್ರಾಮೀಣ ಜನರು ಅದರಲ್ಲೂ ಮಕ್ಕಳು ಆಧುನಿಕತೆಗೆ ತೆರೆದುಕೊಂಡರೂ ಬಾಲ್ಯದಲ್ಲಿನ ಆಟದ ಚಟುವಟಿಕೆಗಳು ಬಹು ಭಿನ್ನವಾಗಿರುತ್ತವೆ. ಗ್ರಾಮೀಣ ಸೊಗಡಿನ ಕ್ರೀಡೆಗಳು ಹೆಚ್ಚು ಪ್ರಭಾವಿಸುತ್ತವೆ. ಹೆಣ್ಣು ಗಂಡು ಎಂಬ ಬೇಧಭಾವವಿಲ್ಲದೇ ಎಲ್ಲರೂ ಬೆರೆತು ಕಣ್ಣಮುಚ್ಚಾಲೆ, ಕುಂಟೆಬಿಲ್ಲೆ, ಸೆರೆಮನೆಯಾಟ, ಕಬಡ್ಡಿ, ತಲೆಕೆಳಗೆ ಮಾಡಿ ಲಗಾಟ ಹೊಡೆಯುವುದು, ಓಡುವುದು, ಜಿಗಿಯುವುದು, ಹಗ್ಗದಾಟ, ಮಂಗನಾಟ ಅಂದು ಕಾಣಬಹುದಾಗಿತ್ತು. ಇಂತಹ ಎಲ್ಲ ಆಟಗಳನ್ನು ಆಡಿ ನಲಿದ ಅಂದಾನಿಯವರು ಇಂತಹ ಚಿತ್ರಗಳ ಮೂಲಕ ಅವುಗಳನ್ನು ಪುನಃ ನೆನಪಿಸಿಕೊಂಡಿದ್ದಾರೆ. ಆದರೆ ಇತ್ತೀಚೆಗೆ ಅವು ಮರೆಯಾಗುತ್ತಿರುವುದನ್ನು ಈ ಚಿತ್ರದಲ್ಲಿ ಸೆರೆಹಿಡಿದಿರುವುದು ಕಂಡುಬರುತ್ತದೆ.

### ೨. ಹೆಣ್ಣು ಮಕ್ಕಳಿಗೆ ಸ್ವತಂತ್ರ್ಯವಿಲ್ಲದ ಸನ್ನಿವೇಶ

ಕ್ಯಾನ್‌ವಾಸ್ ಮೇಲೆ ಆಕ್ರಾಲಿಕ್ ಮಾಧ್ಯಮದಲ್ಲಿ ರಚಿಸಲ್ಪಟರುವ ಈ ಕಲಾಕೃತಿಯಲ್ಲಿ ಕಣ್ಣಿಗೆ ತಂಪನ್ನು ಎರಚುವಂತಹ ವರ್ಣ ಬಳಕೆ ಮಾಡಲಾಗಿದೆ. ಸಂಪೂರ್ಣ ಕಲಾಕೃತಿಯಲ್ಲಿ ಪ್ರಮಾಣಬದ್ಧವಾದಂತಹ ವರ್ಣಗಳ ಹೊಂದಾಣಿಕೆ ಮಾಡಿಕೊಂಡು ಸಂಯೋಜಿಸಿದ್ದಾರೆ. ಹೆಚ್ಚಾಗಿ ಕಳೆಬಂದಿದೆ. ಅತ್ಯಂತ ಸರಳ ಶೈಲಿಯ ವರ್ಣ ಬಳಕೆಯಾಗಿದ್ದರೂ ಕೂಡ ಕಲಾವಿದರ ಪ್ರಬುದ್ಧ ಯೋಜನಾ ಶಕ್ತಿಗೆ ಸಂಯೋಜನೆಗೊಂಡಿದೆ.

ಈ ಚಿತ್ರದಲ್ಲಿ ತಾಯಿ ತನ್ನ ಮಗಳನ್ನು ಮನೆಯೊಳಗೆ ಒತ್ತಾಯದ ಮೇರೆಗೆ ಎಳೆದೊಯ್ಯುತ್ತಿರುವುದನ್ನು ಕಾಣಬಹುದು. ಇಂದಿನ ದಿನಗಳಲ್ಲಿ ಪ್ರಾಪ್ತವಯಸ್ಕರು ಮಾತ್ರವಲ್ಲದೇ ಚಿಕ್ಕ ಮಕ್ಕಳನ್ನೂ



1. ಗ್ರಾಮೀಣ ಕ್ರೀಡೆಗಳು ರೈಸ್ ಪೇಪರ್ 15/22



2. ಹೆಣ್ಣುಮಕ್ಕಳಿಗೆ ಸ್ವತಂತ್ರ್ಯವಿಲ್ಲದ ಸನ್ನಿವೇಶ ರೈಸ್ ಪೇಪರ್



ಆಟ ರೈಸ್ ಪೇಪರ

ಅಪಹರಿಸಲಾಗುತ್ತದೆ. ಈ ಕಲಾಕೃತಿಯಲ್ಲಿ ಬೀದಿಯಲ್ಲಿ ಆಟವಾಡುವಾಗ ಕಳ್ಳರು ಕದ್ದೊಯ್ಯುವುದನ್ನು ಚಿತ್ರಿಸಲಾಗಿದೆ. ಇಲ್ಲಿ ಹನ್ನೆರಡರಿಂದ ಹದಿನೈದು ವಯಸ್ಸಿನ ಅಪ್ರಾಪ್ತ ಬಾಲಕಿಯರನ್ನು ಅಪಹರಣ ಮಾಡುವ ಸಾಧ್ಯತೆಗಳು ಹೆಚ್ಚಾಗಿರುವುದನ್ನು ಚಿತ್ರಿಸಿದೆ. ಮಕ್ಕಳನ್ನು ಹೊರಗೆ ಬಿಡದಂತೆ ತಡೆಯಲು ಸೂಚಿಸಿದೆ. ಇದನ್ನು ಕಂಡ ಪೋಷಕರು ತಮ್ಮ ಮಕ್ಕಳನ್ನು ಮರೆಮಾಡಿಕೊಂಡು, ಅಪ್ಪಿಕೊಂಡು ಗಾಬರಿಯಿಂದ ಆಶ್ಚರ್ಯಚಕಿತರಾಗಿ ನೋಡುವುದನ್ನು ಚಿತ್ರಿಸಲಾಗಿದೆ. ಇದಕ್ಕೆ ಪೂರಕವಾಗಿ ಬಾಳೆಗಿಡವನ್ನು ಸಾಂಕೇತಿಕವಾಗಿ ಬಳಸಿರುವುದನ್ನು ಇಲ್ಲಿ ಕಾಣಬಹುದು.

## ೪.೧೦. ಸಂಕೀರ್ಣ ಮಾಧ್ಯಮದ ಚಿತ್ರಗಳು

### ೧. ಅಂತಿಮ ರಾಗ

**೨/೨೧/೨ ಅಡಿ** ಅಳತೆಯ ಕಲಾಕೃತಿಯು ಅಕ್ರಾಲಿಕ ವರ್ಣದಿಂದ ರೈಸ್ ಪೇಪರ್ ಮೇಲೆ ರಚಿಸಲಾಗಿದೆ. ಈ ಕಲಾಕೃತಿಯಲ್ಲಿ ಇಬ್ಬರು ಹೆಣ್ಣು ಮಕ್ಕಳ ಉಡುಗೆಗಳು ಬಿಳಿ ಮತ್ತು ಕೇಸರಿ ವರ್ಣಗಳಿಂದ ಕೂಡಿದೆ ಮುಂದಿರುವ ಹುಡುಗಿಯ ಬಿಳಿವರ್ಣದಿಂದ ಕೂಡಿದೆ ಇದು ಹುಡುಗಿಯ ಮುಗ್ಧತೆಯ ಮನಸನ್ನು ತಿಳಿಸುತ್ತದೆ. ಹಿಂದೆ ಇರುವ ಹುಡುಗಿಯ ಮುಖದಲ್ಲಿ ಕೇಸರಿ ಮತ್ತು ಬಟ್ಟೆಗೆ ಕೆಂಪು ವರ್ಣ ಕಂಡುಬರುತ್ತದೆ ಇದು ಭಯವನ್ನು ವ್ಯಕ್ತಪಡಿಸುತ್ತದೆ. ನಾಲ್ಕು ಪಕ್ಷಿಗಳು ಹಳ್ಳದಲ್ಲಿರುವ ಮೀನನ್ನು ತಿನ್ನಲು ಪ್ರಯತ್ನಿಸುತ್ತಿವೆ. ಅಲ್ಲಿ ಆವರಿಸಿರುವ ಕಪ್ಪು ವರ್ಣ ಮತ್ತು ಕೆಂಪು ವರ್ಣ ಮೀನಿನ ಕೋನೆಯ ಕ್ಷಣಗಳು ಸೂಚಿಸುತ್ತಿದೆ. ಇನ್ನೊಂದು ರೀತಿ ಇದನ್ನು ನೋಡಬಹುದು.

ಈ ಚಿತ್ರದಲ್ಲಿ ಹಕ್ಕಿಯೊಂದು ಮೀನನ್ನು ಹಿಡಿಯಲು ನದಿಯ ಹತ್ತಿರ ಧಾವಿಸುತ್ತಿವೆ. ಅದನ್ನು ಹುಡುಗಿಯರಿಬ್ಬರು ಆಕರ್ಷಕವಾಗಿ ನೋಡುತ್ತಿದ್ದಾರೆ. ಅಂತಿಮ ರಾಗ ಹೆಸರೇ ಸೂಚಿಸುವಂತೆ ಇದೊಂದು ಕೊನೆಯದಾದ ಧ್ವನಿ ಸೂಚನೆ ಎಂಬರ್ಥ ನೀಡುತ್ತಿದೆ. ಚಿತ್ರಕಾರರು ತಮ್ಮ ಈ ಚಿತ್ರದಲ್ಲಿ ಸಹಜವಾದಂತಹ ಹಕ್ಕಿ ಮತ್ತೆ ಮೀನಿನ ರೂಪಕ ಮೂಲಕ ಹುಡುಗಿಯರ ಮನಸ್ಸಿನಲ್ಲಿರುವ ಅನೇಕ ನೋವು ದುಃಖ ಮುಂತಾದವುಗಳ ಕೊನೆಯೆಂದೋ ಅಥವಾ ಅವು ಮುಕ್ತಾಯವೆಂದೋ ತಿಳಿಸುತ್ತಿರುವಂತಿದೆ. ಒಂದು ಪ್ರಾಣಿ ಮತ್ತೊಂದು ಪ್ರಾಣಿಯನ್ನು ತನ್ನ ಆಹಾರ ಪರಿಕ್ರಮವಾಗಿ ಉಪಭೋಗಿಸುವುದಾದರೆ ಈ ಸಮಾಜದಲ್ಲಿ ಹೆಣ್ಣನ್ನು ಸಹ ಅದೇ ರೀತಿಯಾಗಿ ಬಳಸಿಕೊಳ್ಳುತ್ತಿರುವುದನ್ನು ಚಿತ್ರಕಾರರೂ ಸೂಕ್ಷ್ಮ ಎಳೆಯೊಂದರೊಂದಿಗೆ ಹೊರತಂದಿದ್ದಾರೆ. ಈ ರೀತಿಯಿಂದ ಹೆಣ್ಣು ಮತ್ತು ಪ್ರಕೃತಿಯ ಅಂತರ್‌ಸಂಬಂಧವನ್ನು ಈ ಚಿತ್ರದೊಂದಿಗೆ ಅಂದಾನಿಯವರು ಕಟ್ಟಿಕೊಟ್ಟಿದಾರೆ.

### ೨ ಟಿ.ವಿ ವೀಕ್ಷಿಸುತಿರುವ ದೃಶ್ಯ

ಅಂದಾನಿಯವರು ಕಲೆಯನ್ನು ಕೇವಲ ವಾಸ್ತವಿಕತೆಗೆ ಮಾತ್ರ ಅನ್ವಯಿಸದೇ ಅದನ್ನು ಕಲಾತ್ಮಕವಾಗಿ ನೋಡುವರು. ಪ್ರಥಮ ಬಾರಿಗೆ ಟಿ.ವಿ ಯಂತಹ ದೃಶ್ಯಮಾಧ್ಯಮ ಬಳಕೆಗೆ ಬಂದಾಗ ಜನರು ಅದರಿಂದ ಹೇಗೆ ಆಕರ್ಷಿತರಾಗಿದ್ದರು. ಇನ್ನುಳಿದ ಕೆಲಸಗಳನ್ನು ಬಿಟ್ಟು ಅದನ್ನು ನೋಡಲು ಯಾವ ರೀತಿ ಒಂದೇ ಕಡೆಗೆ ಕುಳಿತುಕೊಳ್ಳುತ್ತಿದ್ದರು ಎಂಬುದನ್ನು ಇಲ್ಲಿ ಚಿತ್ರಿಸಲಾಗಿದೆ. ಮೂವರು ಮಹಿಳೆಯು

ಟಿ.ವಿ ವೀಕ್ಷಿಸುತ್ತಿರುವ ದೃಶ್ಯ ಇಲ್ಲಿದೆ. ಒಂದು ಚಿತ್ರ ಅಥವಾ ಕಲೆಯು ಹಲವರಿಗೆ ಹಲವು ರೀತಿಯಲ್ಲಿ ಭಾವನೆಗಳನ್ನು ಹೊರಹೊಮ್ಮಿಸಬಹುದು. ಕಲೆಗಾರ, ಕವಿ ಅಥವಾ ಸಾಹಿತಿ ಯಾರೇ ಆದರೂ ನಿರ್ದಿಷ್ಟ ಮಿತಿಯನ್ನು ಗುರುತಿಸಿಕೊಡಲಾರರು ಅದು ಓದುಗ ಅಥವಾ ಚಿತ್ರವನ್ನು ವೀಕ್ಷಿಸುವವನಲ್ಲಿ ಭಿನ್ನ ಭಿನ್ನ ರೀತಿಯ ಅರ್ಥಗಳನ್ನು ಮೂಡಿಸಲು ಸಾಧ್ಯವಾಗುತ್ತದೆ. ಅಂತೆಯೇ ಅಂದಾನಿಯವರ ಈ ಚಿತ್ರವು ಕೇವಲ ಅವರು ಟಿ.ವಿ ಮಾಧ್ಯಮವನಿಟ್ಟುಕೊಂಡು ಅಂದಿನ ವಾಸ್ತವ ಚಿತ್ರಣವನ್ನು ಚಿತ್ರಿಸಿದರೆಂದು ಹೇಳಿಕೊಂಡರೂ ಅದು ಇಂದಿನ ಸಂದರ್ಭವನ್ನು ದಾಖಲಿಸುತ್ತದೆ. ಎಂದು ಹೇಳಬಹುದು. ಏಕೆಂದರೆ ಚಿತ್ರದಲ್ಲಿ ಹತ್ತಾರು ಕುರ್ಚಿಗಳು ಮತ್ತು ಸ್ತ್ರೀಯರು ಕುಳಿತಿರುವುದು ಇಂದಿನ (theater) ಚಿತ್ರಮಂದಿರದ ಕಲ್ಪನೆಯನ್ನು ಬಿಂಬಿಸುತ್ತದೆ. ಅಂತೆಯೇ ಸ್ತ್ರೀಯರಿಗೆ ಅಂದಿನ ಕಾಲದಲ್ಲಿ ಮುಕ್ತವಾದ ಸ್ವಾತಂತ್ರವು ಇಲ್ಲದಿರುವಾಗ ಅವರೂ ಸಹ ಈ ರೀತಿ ತಮ್ಮನ್ನು ತೊಡಗಿಸಿಕೊಂಡರು ಎನ್ನುವುದನ್ನು ಅಂದಾನಿಯವರು ಚಿತ್ರಿಸಿರುವುದು ಅವರ ಸ್ತ್ರೀಪರ ಮನೋಭಾವನೆಯನ್ನು ತಿಳಿಸುತ್ತದೆ.

### ೩. ಗಾಂಧೀಜಿಯವರ ಶ್ರದ್ಧಾಂಜಲಿ ಕಾರ್ಯಕ್ರಮ

ಭಾರತದ ಸ್ವಾತಂತ್ರ್ಯಕ್ಕಾಗಿ ಹಗಲಿರುಳು ದುಡಿದವರಲ್ಲಿ ಮಹಾತ್ಮಗಾಂಧೀಜಿ ಪ್ರಮುಖರು. ಇವರು ಮರಣ ಹೊಂದಿದ ನಂತರ ಆಯೋಜಿಸಿದ್ದ ಶ್ರದ್ಧಾಂಜಲಿ ಕಾರ್ಯಕ್ರಮದಲ್ಲಿ ಪುಷ್ಪಗುಚ್ಛವನ್ನು ಅರ್ಪಿಸುತ್ತಿರುವ ವ್ಯಕ್ತಿಯ ಚಿತ್ರವನ್ನು ರಚಿಸಲಾಗಿದೆ. ಗಾಂಧೀಜಿಯವರು ಹಿಂದೆ ಇಡೀ ದೇಶದ ಸ್ವಾತಂತ್ರ್ಯ ಹೋರಾಟದ ಬೆನ್ನೆಲುಬಾಗಿದ್ದರು ಎಂಬುದು ಇದರ ತಿರುಳಾಗಿದೆ.

### ೪. ನನ್ನ ಹಳ್ಳಿಯ ಮನೆ

ಈ ಕಲಾಕೃತಿಯು ೧೧/೧೫ ಇಂಚು ಅಳತೆಯನ್ನು ಹೊಂದಿದ್ದು, ೧೯೯೪ರಲ್ಲಿ ಪೆನ್ನು ಮತ್ತು ಮಿಶ್ರಮಾಧ್ಯಮದಿಂದ ಪೇಪರಿನ ಮೇಲೆ ರೇಖಾಚಿತ್ರ ರಚಿಸಲಾಗಿದೆ. ಕಲಾವಿದ ವ್ಹಿ.ಜಿ.ಅಂದಾನಿಯವರ ಬಾಲ್ಯವನ್ನು ನೆನಪಿಸುತ್ತದೆ. ಅಂದಾನಿಯವರು ಅವರು ಚಿಕ್ಕವರಿದ್ದಾಗ ಮನೆಯ ಬಾಗಿಲಿನ ಚೌಕಟ್ಟಿನ ಮೇಲೆ ಎರಡು ಕುದುರೆಯ ಮುಖಗಳಿಂದ ಕೂಡಿದೆ. ಅವರು ಚಿತ್ರಿಸಿದ ಕುದುರೆಗಳು ಚಲನೆಯ ಸಂಕೇತವಾಗಿದೆ. ಮನೆ ಯಾವಾಗಲೂ ಪ್ರಗತಿಯಲ್ಲಿ ಇರುತ್ತದೆ ಎಂಬುದು ಸೂಚಿಸುತ್ತದೆ.

ಹಾಗೆಯೇ ಅವರು ತಮ್ಮಲ್ಲಿನ ಅನೇಕ ಶಾಸನಗಳು ಹಾಳಾಗುತ್ತಿರುವುದನ್ನು ಕಂಡು ಅದನ್ನು ಕಲೆಯ ಮೂಲಕ ಎಲ್ಲರಿಗೂ ತಿಳಿಸಿರುವಂತೆ, ಮಧ್ಯಭಾಗದಲ್ಲಿ ಬಾಲಕ ಅಂದಾನಿಯವರು ನಿಂತು ಶಿಲಾ ಶಾಸನ ನೋಡಿ ಅವು ಹಾಳಾಗುತ್ತಿರವುದನ್ನು ಬೇಸರದಿಂದ ನೋಡುತ್ತಿರುವುದು ಕಾಣುತ್ತದೆ. ಅವರ ಅಕ್ಕ-ಪಕ್ಕದಲ್ಲಿ ಹಲವಾರು ಹಾಳಾಗಿರುವ ಶಿಲಾ ಶಾಸನಗಳು, ಒಟ್ಟಿನಲ್ಲಿ ಅವರು ಒಂದು ಹಳ್ಳಿಯ ಸಮಗ್ರ ಏಳಿಗೆಯು ಎಲ್ಲ ಸಮುದಾಯದೊಂದಿಗೆ ಸಾಧ್ಯ. ಅದರ ಇತಿಹಾಸವನ್ನು ಕಾಯ್ದುಕೊಳ್ಳುವುದರ ಮೂಲಕ ನಮ್ಮನ್ನ ನಾವು ರೂಪಿಸಿಕೊಳ್ಳಬೇಕು ಎಂದು ತೋರಿಸಿದಂತಿದೆ.

ಕಲೆ ಮತ್ತು ವಾಸ್ತುಶಿಲ್ಪಗಳ ಮಧ್ಯೆ ಬೆಳೆದ ವ್ಹಿ.ಜಿ.ಅಂದಾನಿಯವರು ಪ್ರಬುದ್ಧ ಕಲಾವಿದರು. ಅಂದಾನಿಯವರಿಗೆ ಚಿತ್ರಕಲೆಯು ಪ್ರಭಾವ ಅವರ ಮನೆಯ ವಾಸ್ತುಶಿಲ್ಪದ ಮೂಲಕ

ಬಂದಿರಬೇಕೆಂದೆನಿಸುತ್ತದೆ. ಹಿಂದೆ ಮನೆಗಳನ್ನು ಆಯದ ಪ್ರಕಾರ ಕಟ್ಟಲಾಗುತ್ತಿತ್ತು. ಅಂದಾನಿಯವರ ಮನೆಯ ತಲೆಬಾಗಿಲನ್ನು ಗಮನಿಸಿದರೆ ಅದು ಅಶ್ವ ಆಯದಲ್ಲಿ ಕಟ್ಟಿರಬೇಕೆಂದೆನಿಸುತ್ತದೆ. ಏಕೆಂದರೆ ಅದರ ಸೂಚಕವಾಗಿ ಬಾಗಿಲಿನ ಎರಡೂ ಬದಿಯುಲ್ಲಿ ಕುದುರೆಯ ಮುಖಶಿಲ್ಪಗಳನ್ನು ಅಳವಡಿಸಿರುವುದು ಕಂಡುಬರುತ್ತದೆ. ಅಲ್ಲದೇ ಕಲೆಯಲ್ಲಿ ಪ್ರಾಚೀನ ಕಲೆಯಾದ ಬರವಣಿಗೆಯ ಕಲೆಯನ್ನು ಅಂದರೆ ಶಾಸನಗಳ ಕುರಿತು ಚಿತ್ರಬಿಡಿಸಿರುವುದು ಅವರು ಚಿತ್ರಕಲೆಗೆ ನೀಡಿದ ಮಹತ್ವವನ್ನು ಎತ್ತಿ ತೋರಿಸುತ್ತದೆ. ಕುದುರೆಗಳ ಮುಖಗಳನ್ನು ತಲೆಬಾಗಿಲಿಗೆ ಕೂಡಿಸಿರುವುದಕ್ಕೆ ಅದು ತನ್ನದೇ ಆದ ಮಹತ್ವವನ್ನು ಹೊಂದಿರುತ್ತದೆ. ಕುದುರೆಯ ಸಂಕೇತ ಸದಾ ಜಾಗೃತವಾಗಿರುವುದು ಎಂದರ್ಥ. ಕುದುರೆ ಸದಾ ನಿಂತಿರುತ್ತದೆ ಮಲಗುವುದಿಲ್ಲ. ಇದು ಪ್ರಗತಿಯ ಸಂಕೇತವೂ ಆಗಿದೆ. ಕುದುರೆಗೆ ಅಗಾಧವಾದ ಶಕ್ತಿಯಿರುತ್ತದೆ. ಅದರ ಓಟವನ್ನು ಎಲ್ಲರೂ ಒಪ್ಪಿಕೊಳ್ಳುತ್ತಾರೆ. ಎಂದೂ ನಿಲ್ಲದೇ ನಿರಂತರವಾಗಿ ಚಲಿಸುವ ಗುಣವನ್ನು ಹೊಂದಿದೆ. ಹಾಗಾಗಿ ಬಹುತೇಕವಾಗಿ ಹಳೆಯ ಕಾಲದ ಮನೆಗಳಿಗೆ ಅದರ ಸಂಕೇತವಾಗಿ ತಲೆಬಾಗಿಲಿಗೆ ಕುದುರೆಮುಖದ ಶಿಲ್ಪಗಲ್ಲನ್ನು ಕೆತ್ತಿ ಅಳವಡಿಸಲಾಗುತ್ತಿತ್ತು. ಇದನ್ನು ಅಂದಾನಿಯವರು ತಮ್ಮ ರೇಖೆಗಳ ಮುಖಾಂತರ ಸೆರೆಹಿಡಿದಿದ್ದಾರೆ

**೫. ಪ್ರೀತಿಗಾಗಿ ಅರ್ಜಿಯ ನಿರಾಕರಣೆ**

ಈ ಕಲಾಕೃತಿಯು ೧೫/೨೨ ಇಂಚು ಅಳತೆಯನ್ನು ಹೊಂದಿದ್ದು. ೧೯೬೭ರಲ್ಲಿ ಇಂಡಿಯನ್ ಇಂಕ್‌ನಿಂದ ಪೇಪರ್ ಮೇಲೆ ರಚಿಸಿದ್ದಾರೆ.

ಈ ಕಲಾಕೃತಿಯ ಮೂವರೂ ಪುರುಷರು ತನ್ನ ಪ್ರೇಮದ ಸಂದೇಶವನ್ನು ತಿಳಿಸಲು ಗುಳಿಯನ್ನು ಸಂಕೀರ್ಣವಾಗಿ ಬಳಸಿಕೊಂಡಿದ್ದು ಹೆಣ್ಣು ಇದನ್ನು ತಿರಸ್ಕರಿಸುವ ರೀತಿಯಲ್ಲಿ ಕಲಾವಿದನು ರಚಿಸಿದ್ದು. ಇದರಲ್ಲಿ ರೇಖಾ ಪ್ರಧಾನವಾಗಿದ್ದು. ಅಲ್ಲಲ್ಲಿ ಇಂಡಿಯನ್ ಇಂಕ್‌ನಲ್ಲಿ ಡ್ರೈ ಬ್ರಶ್‌ನಿಂದ ಲೇಪಿಸಲಾಗಿದೆ.

ಈ ಚಿತ್ರದಲ್ಲಿ ಮೂರು ಜನ ಯುವಕರು ಓರ್ವ ಯುವತಿಯನ್ನು ಪ್ರೀತಿಸಲು ಅರ್ಜಿ ಹಾಕಿದ ಸನ್ನಿವೇಶವನ್ನು ಗೂಳಿಯ ಚಿತ್ರದ ಮೂಲಕ ಗುರುತಿಸಲಾಗಿದೆ. ಗೂಳಿಯಂತೆ ಕೆಲವು ಯುವಕರು ಸಹಿತ ಗಟ್ಟಿಮುಟ್ಟಾಗಿ, ಬಿಸಿರಕ್ತದಿಂದ ಕೂಡಿ, ಉತ್ಸಾಹದ ಚಿಲುಮೆಯಾಗಿರುತ್ತಾರೆ. ಅವರ ಯೌವ್ವನ ಉಕ್ಕಿ ಹರಿಯುತ್ತದೆ. ನೀನು ನಮಗೆ ಸರಿಯಾಗಿ ಜೋಡಿಯಾಗುವೆ. ಹಾಗಾಗಿ ನೀನು ನಮ್ಮ ಪ್ರೇಮ ನಿವೇದನೆಯನ್ನು ಸ್ವೀಕರಿಸಬೇಕೆಂದು ಹಾತೊರೆಯುತ್ತಾರೆ. ಆದರೆ ಯೌವ್ವನದ ಯುವತಿ ಇವರ ಮನಸ್ಸಿನ ಚಪಲವನ್ನು ಅರಿತು ಪ್ರೀತಿ, ಪ್ರೇಮ, ಪ್ರಣಯದಿಂದ ದೂರವಿದ್ದೇನೆ. ನೀವು ಹತ್ತಿರ ಬರಬೇಡಿ. ಬಂದರೆ ಒದೆ ತಿನ್ನಬೇಕಾಗುತ್ತದೆ. ಎಂಬ ಅಂಶವನ್ನು ಚಿತ್ರಿಸಲಾಗಿದೆ. ಆದರೂ ಹೆಣ್ಣನ್ನು ಪಡೆಯಬೇಕೆಂದು ಕದ್ದುಮುಚ್ಚಿ ಹೊಂಚುಹಾಕುತ್ತಿರುವುದು ಇಲ್ಲಿ ಕಂಡುಬರುತ್ತದೆ.

**೬. ವಚನ ಪಠಣ (ಬಸವಣ್ಣನ)**

ಈ ಚಿತ್ರದಲ್ಲಿ ಅಂದಾನಿಯವರು ಬಸವಣ್ಣನ ವಚನಗಳನ್ನು ಪಠಣ ಮಾಡುತ್ತಿರುವುದು ಚಿತ್ರಿಸಿದ್ದಾರೆ.

ಅದರ ಸುತ್ತ ಮುತ್ತ, ಪಕ್ಷಿ ಪ್ರಕೃತಿ, ಹೂ ಕುಂಡದಲ್ಲಿ ಸಸಿಯೊಂದು ಬೆಳೆಯುತ್ತಿರುವಂತಹ ಚಿತ್ರಣಗಳಿವೆ. ಈ ಎಲ್ಲಾ ಚಿತ್ರಗಳು ರೂಪಕಗಳ ರೀತಿಯಲ್ಲಿ ಕೆಲಸ ಮಾಡುತ್ತಿರುವುದನ್ನು ಕಾಣಬಹುದಾಗಿದೆ. ಇಲ್ಲಿ ಪ್ರತಿಯೊಂದಕ್ಕೂ ಅಂತರ್ ಸಂಬಂಧವಿರುವುದನ್ನು ಸೂಕ್ಷ್ಮವಾಗಿ ಗಮನಿಸಬೇಕಾಗುತ್ತದೆ. ಸಮಾಜದಲ್ಲಿ ಸ್ವಾಸ್ಥತೆಯನ್ನು ಕಾಣಬಹುದಾಗಿದೆ. ಆದರೆ ಇಂದು ಆಧುನಿಕ ಜೀವನ ದೃಷ್ಟಿಯು ಮನುಷ್ಯನ ಜೀವನವನ್ನು ಹೊಕ್ಕಿರುವುದರಿಂದ ಅವನು ಹಿಂದಿನ ಜೀವನ ಪರಂಪರೆಯನ್ನು ಮೌಲ್ಯಾದರ್ಶನಗಳನ್ನು ಕಳೆದುಕೊಳ್ಳುತ್ತಾ ಬಂದಿದ್ದಾನೆ. ಆದ್ದರಿಂದ ಅವನು ನೈತಿಕತೆಯನ್ನು ಕಳೆದುಕೊಂಡು ಅನೈತಿಕ ಜೀವನಾದರ್ಶನಗಳನ್ನು ಕಂಡುಕೊಳ್ಳುತ್ತಿದ್ದಾನೆ. ಆದ್ದರಿಂದ ಮನುಷ್ಯ ಮತ್ತೆ ತನ್ನ ಹಿಂದಿನ ಜೀವನಾದರ್ಶವನ್ನು ವಚನ ಪಠಣೆ ಮುಂತಾದವುಗಳಿಂದಾಗಿ ಸಾಮುದಾಯಿಕ ಜೀವನಕ್ಕೆ ಮತ್ತೆ ಹಿಂದಿರುಗಬೇಕೆಂಬ ಸಂದೇಶವನ್ನು ನೀಡುತ್ತಿದ್ದಾರೆ.

೧೧x೧೫ ಈ ರೇಖಾಚಿತ್ರವು ೨೦೧೨ರಲ್ಲಿ ಕಪ್ಪು ವರ್ಣದ ಮಾರ್ಕರ ಪೆನ್ನಿನಿಂದ ಪೇಪರ ಮೇಲೆ ರಚಿಸಿದ್ದಾರೆ. ಈ ರೇಖಾಕೃತಿಯಲ್ಲಿ ಬಸವಣ್ಣ ವಚನ ಪಠಣ ಮಾಡುತ್ತಿದ್ದರು. ದೃಷ್ಟಿ ಬೇರೆಕಡೆಗೆ ಇರುವುದು ಕಂಡುಬರುತ್ತದೆ. ಬಸವಣ್ಣನ ಸಂಕೇತಿಕವಾಗಿ ಹಣೆಗೆ ವಿಭೂತಿ ಕೊರಳಲ್ಲಿ ಲಿಂಗ ಹಾಕಿಕೊಂಡಿರುವುದರಿಂದ ಬಸವಣ್ಣ ಎಂದು ಗುರುತಿಸಲಾಗುತ್ತದೆ. ಹಿಂಭಾಗದಲ್ಲಿ ಸುಂದರವಾದ ಹೂ ಕುಂಡದಲ್ಲಿ ಹೂಗಳು ಅರಳಿದ್ದು ಅದರಲ್ಲಿನ ಸಿಹಿಯಾದ ಪದಾರ್ಥವನ್ನು ಕುಡಿಯಲು ಪಕ್ಷಿಗಳ ಕಲರವ ವ್ಯಕ್ತಪಡಿಸವುದು ಕಂಡು ಬರುತ್ತದೆ.

ಹನ್ನೆರಡನೆಯ ಶತಮಾನದಲ್ಲಿ ಸಾಮಾಜಿಕ ವ್ಯವಸ್ಥೆಯನ್ನು ಸರಿಪಡಿಸಲು ಕಲ್ಯಾಣದಲ್ಲಿ ಅನುಭವ ಮಂಟಪವನ್ನು ಸ್ಥಾಪಿಸಿದವರು ಬಸವಣ್ಣನವರು. ಇವರು ತಮ್ಮ ವಚನದಲ್ಲಿ ಪ್ರಕೃತಿಯನ್ನು ದೇವರೆಂದು ಬಗೆದಿದ್ದಾರೆ. 'ಯಥಾ ಬ್ರಹ್ಮಾಂಡ ತಥಾ ಪಿಂಡಾಂಡ' ಎಂಬ ಸಿದ್ಧಾಂತವನ್ನು ತಿಳಿಸಿದವು. ಅದ್ವೈತ ಸಿದ್ಧಾಂತದ ಅಂಶಗಳ ಜೊತೆಗೆ ಶೈವ ಮತದ ಪರಂಪರೆಯನ್ನು ಹೊಸದಾಗಿ ಮುರಿದು ಕಟ್ಟುವ ಪ್ರಯತ್ನ ಮಾಡಿದರು. ಅದಕ್ಕಾಗಿ ಜ್ಞಾನ ಬಹಳ ಮುಖ್ಯ. ಜ್ಞಾನ ಪಡೆಯಲು ಪ್ರಶಾಂತವಾದ ಸ್ಥಳವನ್ನು ಆಯ್ಕೆ ಮಾಡಿಕೊಳ್ಳಬೇಕು. ಪಶುಪಕ್ಷಿ ಸಂಕುಲಗಳ ಕಲರವವನ್ನು ಆಲಿಸುವುದು ಶರಣರಿಗೆ ಆನಂದವನ್ನು ಉಂಟುಮಾಡುತ್ತದೆ. ಅನೇಕ ಕನಸುಗಳನ್ನು ಹೊಂದಿದ ಬಸವಣ್ಣ ಅವುಗಳನ್ನು ಸಾಕಾರಗೊಳಿಸಲು ಬಾನೆತ್ತರಕ್ಕೆ ಗಿರಿ ಗಂಧರ್ವ ಕೋಗಿಲೆಗಳಂತೆ ಜೀವನ ಸಾಧನೆ ಮಾಡಿದ ಶರಣರು ಇವರಾಗಿದ್ದಾರೆ. ಇವರ ಪ್ರಯತ್ನದ ಫಲವಾಗಿ ಹನ್ನೆರಡನೆಯ ಶತಮಾನ ವಚನ ಸಾಹಿತ್ಯವನ್ನು ಜಗತ್ತಿಗೆ ಕಾಣಿಕೆಯಾಗಿ ನೀಡಿತ್ತು. ಇವೆಲ್ಲದಕ್ಕೆ ಜ್ಞಾನ, ಪರಿಸರ ಜ್ಞಾನ ಅತ್ಯವಶ್ಯ ಎಂಬುದನ್ನು ತಿಳಿಸಲಾಗಿದೆ.

### ೭. ಲೇಡಿ ಪ್ರೀತಿ ತೋರಿಸು

ಈ ರೇಖಾಕೃತಿಯು ೧೧/೧೫ ಇಂಚು ಅಳತೆಯನ್ನು ಹೊಂದಿದ್ದು, ೨೦೦೮ರಲ್ಲಿ ಮಾರ್ಕರ್ ಪೆನ್ನು ಮತ್ತು ಇಂಡಿಯನ್ ಇಂಕ್‌ನಿಂದ ಪೇಪರಿನ ಮೇಲೆ ರೇಖಾ ಚಿತ್ರ ರಚಿಸಲಾಗಿದೆ.

ಈ ರೇಖಾಕೃತಿಯಲ್ಲಿ ಮಹಿಳೆ ಹುಲಿಯ ಮೇಲೆ ಸವಾರಿ ಮಾಡುತ್ತಿದ್ದು ಐದು ಕೈಗಳು ಕಾಣುತ್ತವೆ. ಬಲಿಸ್ಟ ಸಾಂಕೇತಿಕವಾಗಿ ಮಹಿಳೆಯನ್ನು ತೋರಿಸಲಾಗಿದೆ. ಹಿಂಭಾಗದಲ್ಲಿ ಪುರುಷನು ಪುಸ್ತಕ ಓದುತಿರುವುದು ಕಂಡು ಬಂದರು ಮಹಿಳೆ ಹುಲಿ ಸವಾರಿ ಮಾಡುತ್ತಿರುವುದನ್ನು ನೋಡುತ್ತಿರುವ ದೃಶ್ಯ ಕಂಡುಬರುತ್ತದೆ. ಮಧ್ಯದಲ್ಲಿ ಕುಂಡದಲ್ಲಿ ಮಹಿಳೆಯ ಆಕೃತಿ ಸ್ಪಷ್ಟವಾಗಿ ಕಾಣದೇ ಸಾಂಕೇತಿಕವಾಗಿ ಮಹಿಳೆ ಎಂದು ಗುರ್ತಿಸಬಹುದು. ಕುಂಡದ ತುಂಬೆಲ್ಲಾ ಹೂ ಬಳ್ಳಿಗಳಿಂದ ಹಬ್ಬಿಕೊಂಡಿದ್ದು ಅದರಲ್ಲಿ ಅರಳಿರುವ ಹೂಗಳು ಮಹಿಳೆಯ ಕನಸಿನ ಆಸೆಯ ರೂಪದಲ್ಲಿ ಚಿಗುರಿರುವ ಬಳ್ಳಿಯಲ್ಲಿನ ಹೂಗಳನ್ನು ತೊರಿಸಲಾಗಿದೆ.

### ೮. ವೃದ್ಧಾಪ್ಯದಲ್ಲಿ ಹಳೆಯ ನೆನಪುಗಳು

ಈ ಕಲಾಕೃತಿಯು ೩/೩ ಅಡಿ ಆಳತೆಯನ್ನು ಹೊಂದಿದ್ದು. ಆಕ್ರಾಲಿಕ್ ವರ್ಣದಿಂದ ಕ್ಯಾನ್ವಾಸ ಮೇಲೆ ರಚಿಸಿರುವುದು ಕಂಡುಬರುತ್ತದೆ. ಇದು 'ಪೂನಾ' ಸಂಗ್ರಹದಲ್ಲಿದೆ.

ಈ ಕಲಾಕೃತಿಯಲ್ಲಿ ಒಬ್ಬ ವೃದ್ಧ ಕುಳಿತಿರುವುದನ್ನು ಕಾಣುತ್ತೇವೆ. ಅವನ ಮುಂದೆ ಒಂದು ಹೆಂಗಸಿನ ಚಿತ್ರವನ್ನು ಮುಂದಿಟ್ಟುಕೊಂಡು ತನ್ನ ಆಸೆಗಳನ್ನು ನೆನಪಿಸುವುದು ಈ ಚಿತ್ರದಲ್ಲಿ ಕಂಡುಬರುತ್ತದೆ. ಇಲ್ಲಿ ಬಿಳಿ, ಕಂದು, ನೀಲಿ, ಹಳದಿ ಬಣ್ಣಗಳಿಂದ ಕಲಾಕೃತಿಯನ್ನು ಪೂರ್ಣಗೊಳಿಸಿದ್ದಾರೆ. ಇವನ ಮುಂಭಾಗದಲ್ಲಿ ಕುಂಡದಲ್ಲಿರುವ ಸೂರ್ಯಕಾಂತಿ ಹೂವಿಗೆ ಇವನ ಮನಸ್ಸನ್ನು ಹೋಲಿಸಿದ್ದು ಹೆಂಗಸಿನ ಹಿಂಭಾಗದಲ್ಲಿ ಬಳಸಿದ ನೀಲಿ ಬಣ್ಣವು ಕಾಮದ ಸಂಕೇತವನ್ನು ಸೂಚಿಸುತ್ತದೆ.

### ೯. ನಗರದ ಮಹಿಳೆಯ ಕನಸು

೧೨/೮ ಅಳತೆಯ, ಆಕ್ರಾಲಿಕ್ ವರ್ಣದಿಂದ ಪೇಪರಿನ ಮೇಲೆ ರಚಿಸಲಾಗಿದೆ. ಈ ಕಲಾಕೃತಿ ದಟ್ಟ ಹಸಿರು ವರ್ಣದ ಹಿನ್ನೆ ಲೆಯನ್ನು ಹೊಂದಿದೆ. ಮುಖ್ಯ ಆಕೃತಿಗೆ ಹೊಂದಿಕೊಳ್ಳುವಂತೆ ವರ್ಣ ಸಂಯೋಜನೆಯನ್ನು ಮಾಡಲಾಗಿದೆ ಮಿತ ವರ್ಣಗಳ ಬಳಕೆಯನ್ನು ಈ ಕಲಾಕೃತಿಯಲ್ಲಿ ಕಾಣಬಹುದು. ಕೇಸರಿ ವರ್ಣ ಹುಲಿ ಕಲಾಕೃತಿಯ ಮುಖ್ಯ ಆಕಷಣೆಯಲ್ಲಿ ಒಂದಾಗಿದೆ.

ವರ್ತಮಾನದಲ್ಲಿ ಮಹಿಳಾ ಸಬಲೀಕರಣದ ಚಿಂತನೆಗಳು ಹಂತಹಂತವಾಗಿ ಬೆಳೆಯತೊಡಗಿದವು. ಜೊತೆಗೆ ಶಿಕ್ಷಣ, ಆಡಳಿತ, ರಾಜಕೀಯ ಮುಂತಾದ ಕ್ಷೇತ್ರಗಳಲ್ಲಿ ಪಾಲ್ಗೊಳ್ಳುವ ಮೂಲಕ ಬಹುದೊಡ್ಡ ಸಾಧನೆಗಳತ್ತ ಸಾಗಿರುವುದು ಗಮನಾರ್ಹ. ಆದರೆ ಅಂದಾನಿಯವರು ಬಿಡಿಸಿದ ಈ ಚಿತ್ರದಲ್ಲಿ ಮಂಚದ ಕೆಳಗೆ ಹುಲಿ ಇದೆ. ಮಂಚದ ಮೇಲೆ ಮಹಿಳೆ ಕುಳಿತಿದ್ದಾಳೆ. ಅಂದರೆ ಸಿಂಹಾಸನದ ಮೇಲೆ ಕುಳಿತುಕೊಳ್ಳುವ ಕನಸಿರುವ ಬಗ್ಗೆ ಗಮನ ಸೆಳೆಯುವ ಕಲಾಕೃತಿ ಇದಾಗಿದೆ. ಇಂದಿನ ಮಹಿಳೆಯರು ಯಜಮಾನಿಕೆಯನ್ನು ಸಾಧಿಸಲು ಬಯಸಿರುವುದನ್ನು ಇಲ್ಲಿ ಚಿತ್ರಿಸಲಾಗಿದೆ. ಕನಸಿನ ಲೋಕದಲ್ಲಿ ಅಧಿಕಾರದ ಚುಕ್ಕಾಣಿಯನ್ನು ಹಿಡಿಯುವ ಚಿಂತನೆಯನ್ನು ಬಿಡಿಸಲಾಗಿದೆ. ಇದು ಇಂದಿನ ಮಹಿಳೆಯಲ್ಲಿರುವ ಭಾವನೆಯಾಗಿದೆ ಎಂಬ ಸಂದೇಶ ನೀಡುತ್ತದೆ. ಜಿಲ್ಲಾ ಪರಿಷತ್ ಮತ್ತು ತಾಲ್ಲೂಕು

ಪಂಚಾಯಿತಿಗಳಲ್ಲಿ ಇಂದು ಸರಕಾರದ ನಿಯಮಾವಳಿಯಂತೆ ಕೆಲವು ಮಹಿಳೆಯರೇ ಅಧಿಕಾರದ ಚುಕ್ಕಾಣಿ ಹಿಡಿಯುತ್ತಿರುವುದನ್ನು ಅಂದಾನಿಯವರು ಅಂದೇ ಊಹಿಸಿದ್ದರು ಎಂದು ಇದರಿಂದ ಹೇಳಬಹುದಾಗಿದೆ.

### ೧೦. ಕನಸಿನ ಕೋಟೆ

ಈ ಕಲಾಕೃತಿಯಲ್ಲಿ ಕಲಾವಿದನ ಕನಸ್ಸಿನ ಕೋಟೆಯನ್ನು ನಿರ್ಮಿಸಿದ್ದು. ಆ ಕೋಟೆಯಲ್ಲಿ ಹಲವಾರು ಕಮಾನುಗಳಿಂದ ಕೂಡಿದ್ದು, ಇದು ಗುಲಬರ್ಗಾದ ನಿಜಾಮರ ಕಾಲದಲ್ಲಿ ಕಟ್ಟಿದಂತಹ ಕೋಟೆಗಳು ಎಂದು ಕಂಡುಬರುತ್ತವೆ. ಅವುಗಳು ಹಾಳಾಗುತಿರುವುದನ್ನು ಅಂದಾನಿಯವರು ತಮ್ಮ ಚಿತ್ರದ ಮೂಲಕ ಮುಂದಿನ ಪೀಳಿಗೆಗೆ ತಿಳಿಸಲು ಇದು ಮಹತ್ವದ ಕಲಾಕೃತಿಯಾಗಿದೆ. ಆ ಪ್ರದೇಶದಲ್ಲಿರುವ ಎಲ್ಲಾ ಕೋಟೆಯನ್ನು ಒಂದೇ ಕಡೆಗೆ, ಹಂತ ಹಂತವಾಗಿ  ಕಂದ್ತು ಮತ್ತು ಕಪ್ಪು ವರ್ಣದಿಂದ ಕಟ್ಟಿದ ಕೋಟೆಯನ್ನು ಒಂದರ ಮೇಲೊಂದರಂತೆ ಜೋಡಿಸಿರುವ ಹಾಗೆ ರಚಿಸಿದ್ದಾರೆ ಹಿಂದಿನ ಭಾಗದಲ್ಲಿ ದೇವಾಲಯ ಹೀಗೆ ಕಲಾವಿದ ತಮ್ಮ ಕನಸ್ಸಿನ ಕೋಟೆ ಕಟ್ಟಿದ್ದಾರೆ.

ಈ ಚಿತ್ರದಲ್ಲಿ ಕಂಡುಬರುವ ಕೋಟೆಯ ಚಿತ್ರವು ಚರಿತ್ರೆಯ ಗತವೈಭವವನ್ನು ಸೂಚಿಸುತ್ತದೆ. ಅದೆಷ್ಟೋ ಜನರ ಶ್ರಮದಿಂದ ರಚನೆಗೊಂಡ ಕೋಟೆಗಳು ಇಂದು ನಶಿಸಿಹೋಗುತ್ತಿವೆ. ಅಂದಿನ ಚರಿತ್ರೆಯನ್ನು ಅರಿಯುವಲ್ಲಿ ಕೋಟೆಗಳು ಮಹತ್ವದ ಆಕರಗಳಾಗಿ ಕಂಡುಬರುತ್ತವೆ. ಚಾರಿತ್ರಿಕ ಪ್ರಜ್ಞೆ ಇರುವ ಅಂದಾನಿಯವರು ರಾಜಪ್ರಭುತ್ವ ವ್ಯವಸ್ಥೆಯನ್ನು ಪ್ರೋತ್ಸಾಹಿಸುವುದರ ಬದಲು ಜನಸಾಮಾನ್ಯರ ಶ್ರಮವನ್ನು ಪರಿಗಣಿಸಿರುವುದು ಗಮನಾರ್ಹ. ಸುಂದರವಾದ, ಭದ್ರವಾದ ಕೋಟೆಗಳನ್ನು ರಕ್ಷಿಸುವುದು ಪ್ರತಿಯೊಬ್ಬರ ಕರ್ತವ್ಯ ಎನ್ನುತ್ತಾರೆ. ಹಳೆಯ ಸಂಸ್ಕೃತಿಯನ್ನು ರೂಢಿಸಿಕೊಂಡು ಹೊಸ ಸಂಸ್ಕೃತಿಯನ್ನು ಅಳವಡಿಸಿಕೊಳ್ಳತ್ತಾ ಸಾಗಬೇಕೆಂಬುದು ಅವರ ವಾದವಾಗಿದೆ. ಸುಸ್ಥಿತಿಯಲ್ಲಿರುವ ಕೋಟೆಗಳನ್ನು ಕುರಿತು ಅಧ್ಯಯನ ನಡೆಯಬೇಕು. ಅಲ್ಲದೇ ಸದ್ಯದಲ್ಲಿ ಈ ಕೋಟೆ ಹೇಗಿದೆ ಎಂಬುದನ್ನು ಚಿತ್ರಿಸಲಾಗಿದೆ. ೧೮/೧೯ ಇಂಚು ಅಳತೆಯ ಈ ಕೃತಿಯು ೧೯೭೮ರಲ್ಲಿ ಜಲವರ್ಣದಿಂದ ಪೇಪರಿನ ಮೇಲೆ ರಚಿಸಲಾಗಿದೆ.

### ೧೧. ತಮಾಷೆಯಲ್ಲಿ ತೊಡಗಿರುವುದು

೧೧/೧೪ ಅಳತೆಯ ಈ ಕಲಾಕೃತಿಯು ೧೯೯೦ರಲ್ಲಿ ಜಲವರ್ಣ ಮಾಧ್ಯಮದಲ್ಲಿ ಪೇಪರಿನ ಮೇಲೆ ರಚಿಸಿದ ಕೃತಿ ಇದಾಗಿದೆ.

ಈ ಚಿತ್ರದಲ್ಲಿ ಯುವತಿಯರು ತಮಾಷೆಯಲ್ಲಿ ತೊಡಗಿರುವುದು ಕಂಡುಬರುತ್ತದೆ. ಪರಸ್ಪರ ವಿಚಾರ ವಿನಿಮಯದ ಸಂದರ್ಭ ಹಾಸ್ಯಪ್ರಜ್ಞೆಯನ್ನು ಪ್ರತಿಯೊಬ್ಬರು ಅಳವಡಿಸಿಕೊಳ್ಳಬೇಕೆಂಬುದನ್ನು ಈ ಚಿತ್ರದಲ್ಲಿ ಕಾಣಬಹುದು. ಹಾಸ್ಯ ಅಪಹಾಸ್ಯವಾಗದೇ ಅದೊಂದು ಪ್ರಜ್ಞೆಯಾದಾಗ ಆರೋಗ್ಯ ವೃದ್ಧಿಗೂ ಸಹಕಾರಿ ಎಂಬುದನ್ನು ಕಲಾಕೃತಿಯ ಮೂಲಕ ಸಾಂಕೇತಿಕವಾಗಿ ಇಲ್ಲಿ ಅಂದಾನಿಯವರು ಬಿಂಬಿಸಿದ್ದಾರೆ.

## ೧೨. ಪ್ರೇಮ ಸಂವಾದ ೧

ಈ ಚಿತ್ರದಲ್ಲಿ ಸಹವಾಸ ದೋಷದಿಂದ ಪ್ರೀತಿಸಿದ ಹುಡುಗನಿಗೆ ಕೈಕೊಟ್ಟು ಮತ್ತೊಬ್ಬನನ್ನು ಪ್ರೀತಿಸುವ ಸಂಗಾತಿಯನ್ನು ಪಾರಿವಾಳಗಳ ಮೂಲಕ ತಿಳಿಯಪಡಿಸಲಾಗಿದೆ. ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುವ ಹುಡುಗನು ಹುಡುಗಿಯ ಕಾಲಿಗೆ ಬಿದ್ದು ಕೇಳಿಕೊಂಡರೂ ಆಕೆ ಬೇರೆ ಹುಡುಗನನ್ನು ಪ್ರೀತಿಸುವುದನ್ನು ಕಾಣಬಹುದು. ಏಕೆಂದರೆ ಸಿನಿಮಾ ಹುಡುಗನಂತಿರುವ ಹೊಸ ಹುಡುಗನನ್ನು ಪ್ರೀತಿಸಲು ಹಾತೊರೆಯುತ್ತಿರುವ ಸನ್ನಿವೇಷವಿದು. ಇದಕ್ಕೆ ಅವಳ ಗೆಳತಿಯ ಸಹವಾಸವೇ ಕಾರಣ ಎನ್ನಬಹುದು. ಅವಳೆದುರಿಗೆ ಮತ್ತೊಬ್ಬನನ್ನು ಪ್ರೀತಿಸುವ, ಪ್ರಣಯದಲ್ಲಿ ತೊಡಗಿರುವುದನ್ನು ಚಿತ್ರಿಸಿದೆ. ಪ್ರಾಮಾಣಿಕವಾಗಿ ಪ್ರೀತಿಸುವ ಹುಡುಗರು ಹುಡುಗಿಯರಿಗೆ ಇಷ್ಟವಾಗುವುದಿಲ್ಲ. ಆಗಾಗ ಬದಲಾಗುತ್ತಿರಬೇಕು ಎಂಬುದು ಇದರಿಂದ ತಿಳಿಯುತ್ತದೆ.

## ೧೩. ಪ್ರೇಮ ಸಂವಾದ ೨

ಈ ಚಿತ್ರದಲ್ಲಿ ಒಬ್ಬ ಯುವತಿ ತಾನು ಪ್ರೀತಿಸುವ ಹುಡುಗ ಹೇಗಿರಬೇಕು ಎಂಬುದನ್ನು ಸೂಚಿಸುವುದಾಗಿದೆ. ಪ್ರೇಮಿಸುವ ಆತುರದಲ್ಲಿ ತನ್ನ ಪ್ರೀತಿಯ ಹುಡುಗ ಗಟ್ಟಿಮುಟ್ಟಾದ ಗೂಳಿಯಂತಿರಬೇಕು. ಯಾವುದನ್ನೂ ಲೆಕ್ಕಿಸದಿರದಂತಿರಬೇಕು. ಆ ಪ್ರದೇಶಕ್ಕೆ ಅವನು ಹೀರೋ ಆಗಿರಬೇಕು. ಕೊಬ್ಬಿದ ಗೂಳಿಯಂತೆ ದಷ್ಟ ಪುಷ್ಟವಾಗಿದ್ದು ತನ್ನ ಕನಸಿನ ರಾಜನಾಗಬೇಕು. ಎಂದು ತನ್ನ ಮುಂದೆ ಗುಲಾಬಿ ಹೂವಿನ ಗುಚ್ಚವನ್ನು ದಿಟ್ಟಿಸಿ ನೋಡುತ್ತಾ, ಆಲೋಚನೆಯಲ್ಲಿ ಮಗ್ನಳಾಗಿರುವ ಚಿತ್ರ ಇಲ್ಲಿದೆ. ನನ್ನ ಹುಡುಗನಿಗೆ ಯಾವುದೇ ಮಿತಿಗಳಿರಬಾರದು. ಅವನು ಸರ್ವಾಧಿಕಾರಿಯಂತಿರಬೇಕು. ಆತನನ್ನು ಪ್ರೀತಿಸುತ್ತೇನೆ ಎಂಬ ಆಕಾಂಕ್ಷೆಯನ್ನು ಹೊಂದಿರುವ ಚಿತ್ರವಾಗಿದೆ.

## ೧೪. ಪ್ರೇಮ ಸಂವಾದ ೩(ಕುರ್ಚಿ)

ಈ ಕಲಾಕೃತಿಯನ್ನು ೨೦೦೨ರಲ್ಲಿ ರಚಿಸಲಾಗಿದ್ದು. ಪೇಪರ್ ಮೇಲೆ ಜಲವರ್ಣದಿಂದ ವಾಶ್ ತಂತ್ರದಿಂದ ಕೃತಿಯನ್ನು ರಚಿಸಿರುವುದನ್ನು ಕಾಣಬಹುದು. ಮೊದಲು ರೇಖೆಯಿಂದ ಆಕೃತಿಗಳನ್ನು ರಚಿಸಿಕೊಂಡು ನಂತರ ಜಲವರ್ಣವನ್ನು ತೊಯ್ದ ಪೇಪರ್ ಮೇಲೆ ಹರಿಬಿಟ್ಟು ಸಂಯೋಜಿಸಿರುವುದನ್ನು ಕಾಣಬಹುದು ಹಸಿರು ಮತ್ತು ಇಪ್ಪೇಲೆ ಬಣ್ಣದ ಹಿನ್ನೆಲೆ ಹೊಂದಿರುವ ಈ ಕಲಾಕೃತಿಯು ಸಮಯದ ಮಿತಿಯಲ್ಲಿ ರಚಿಸಿರುವುದು ತೋರುತ್ತದೆ.

ಈ ಚಿತ್ರದಲ್ಲಿ ಇಬ್ಬರು ಪ್ರೇಮಿಗಳು ಪರಸ್ಪರ ಮಾತನಾಡುವುದನ್ನು ಕಾಣಬಹುದು. ಯೌವ್ವನದ ಭರಾಟೆಯಲ್ಲಿ ಹಲವಾರು ಕನಸುಗಳ ಮಧ್ಯೆ ಪ್ರೀತಿಸುವ ಬಯಕೆಯನ್ನು ಹೊಂದಿರುವುದಾಗಿದೆ. ಹದಿಹರೆಯದ ಯುವಕ ಯುವತಿರು ತಮ್ಮ ಪ್ರೇಮ ಸಲ್ಲಾಪದ ಚರ್ಚೆಯಲ್ಲಿ ತೊಡಗಿರಬಹುದು. ಇಲ್ಲಿ ಮುಖ್ಯವಾಗಿ ಯುವತಿಯು ಅನೇಕ ಕನಸುಗಳನ್ನು ಕಾಣುವುದನ್ನು ಗ್ರಹಿಸಬಹುದಾಗಿದೆ. ಕುರ್ಚಿಯ ಮೇಲೆ ಕುಳಿತಿರುವ ಯುವಕ ಯುವತಿಯ ಮೈಮಾಟಕ್ಕೆ ಮನಸೋತಿರುವುದನ್ನು ಚಿತ್ರಿಸುತ್ತಾ, ತಮ್ಮ ಪ್ರೇಮ ಸಂಬಂಧ ಅಮರವಾಗಿರಲಿ ಎಂಬ ಚಿಂತೆಯಲ್ಲಿ ಮುಳುಗಿ ತೇಲಾಡುವ ಚಿತ್ರಣವನ್ನು ಬಿಡಿಸಲಾಗಿದೆ.

**೧೫. ಪ್ರೇಮ ಸಂವಾದ ೪ (ಗೂಳಿ ಸವಾರಿ)**

೧೯೯೫ರಲ್ಲಿ ರಚಿಸಲಾದ ಈ ರೇಖಾಚಿತ್ರವನ್ನು ಪೇಪರ್ ಅವಕಾಶದಲ್ಲಿ ಕುಂಚದಿಂದ ಕಪ್ಪುವರ್ಣದಿಂದ ರೇಖಾಗಳನ್ನು ಎಳೆದಿರುವುದು ಕಂಡುಬರುತ್ತದೆ. ಈ ರೇಖಾ ಚಿತ್ರದಲ್ಲಿ ಯಾವುದೇ ಶಾಸ್ತ್ರಬದ್ಧ ರಚನೆಯ ಲಿಂಗಗಳನ್ನು ರಚಿಸಿರುವುದನ್ನು ಕಾಣವುದಿಲ್ಲವಾದರೂ ಪ್ರಬುದ್ಧ ಸಂಯೋಜನೆಯನ್ನು ಒಪ್ಪಿಕೊಳ್ಳಲೇಬೇಕು

ಈ ಚಿತ್ರದಲ್ಲಿ ಅಂದಾನಿಯವರು ಸ್ತ್ರೀಯರು ಪುರುಷರ ಅಹಂಕಾರಕ್ಕೆ ಸವಾಲು ಹಾಕಬಲ್ಲರು ಎಂಬುದನ್ನು ಚಿತ್ರಿಸಿದ್ದಾರೆ. ಮದವೇರಿದ ಗೂಳಿಯನ್ನು ಮಣಿಸಲು ಪ್ರೇಮವೆಂಬ ಅಸ್ತ್ರದ ಮೂಲಕ ಸವಾರಿ ಮಾಡಬಹುದು. ಇಲ್ಲಿ ಸ್ತ್ರೀ ಮನಸ್ಸು ಮಾಡಿದರೆ ಏನನ್ನೂ ಸಾಧಿಸಬಹುದೆಂಬ ಸಂದೇಶವಿದೆ. ಕೊಬ್ಬಿದ ಗೂಳಿಯನ್ನು ಮಣಿಸಿದಂತೆ ತನಗೆ ಬೇಕಾದಂತಹ ಬಲಿಷ್ಠರನ್ನು ತನ್ನ ಹಿಡಿತಕ್ಕೆ ಪಡೆಯಬಹುದು ಎಂಬ ಸಂಕೇತವಿದೆ. ಅಲ್ಲದೇ ಪುರುಷರ ಮೇಲೆ ಯಜಮಾನಿಕೆಯನ್ನು ಸಾಧಿಸುವ ಛಲ ಸ್ತ್ರೀಯರಿಗಿದೆ ಎಂಬುದು ಇದರಿಂದ ತಿಳಿಯುತ್ತದೆ.

**೧೬. ಪ್ರೇಮ ಪುರಾಣ (ಓದುವದು)**

ಇಂದಿನ ಕಾಲದ ಹುಡುಗಿಯರು ತಮ್ಮ ಪಾಡಿಗೆ ತಾವಿದ್ದು, ಓದು ಬರೆಹಗಳನ್ನು ರೂಢಿಸಿಕೊಂಡು ಅಧ್ಯಯನ ಮಾಡುತ್ತಿರುವ ಯುವಕರನ್ನು ಪ್ರೀತಿ ಪ್ರೇಮದ ಬಲೆಗೆ ಸಿಲುಕಿಸುವುದೇ ಹೆಚ್ಚು. ಹಲವಾರು ಕನಸುಗಳನ್ನು ಹೊಂದಿದ್ದರೂ ಮನಸ್ಸೆಂಬ ಮರ್ಕಟದ ಮಾತು ಕೇಳಿ ಕನಸುಗಳು ನನಸಾಗದೇ ಉಳಿಯುವುದನ್ನು ಚಿತ್ರಿಸಲಾಗಿದೆ. ಉತ್ತಮ ವಿದ್ಯಾರ್ಥಿಗಳನ್ನು ನಾನಾ ತರಹದ ಗಿಮಿಕ್, ಲಾಜಿಕ್‌ಗಳ ಮೂಲಕ ಪ್ರೇಮದ ಬಲೆಗೆ ಹಾಕಿಕೊಳ್ಳತ್ತಾರೆ. ಹಂತ ಹಂತವಾಗಿ ಅವನನ್ನು ಪ್ರೀತಿ ಪ್ರೇಮದ ನೆಪದಲ್ಲಿ ಸಂಪೂರ್ಣವಾಗಿ ತನ್ನ ವಶಕ್ಕೆ ತೆಗೆದುಕೊಳ್ಳುತ್ತಾಳೆ. ಕೆಲ ದಿನಗಳಾದ ಮೇಲೆ ಗಂಡಿನ ಮೇಲೆ ಸವಾರಿ ಮಾಡುವ ಹೆಣ್ಣು ಸವಾರಿ ಮಾಡುತ್ತಾಳೆ ಎಂಬುದನ್ನು ಹುಲಿಯ ಮೇಲೆ ಯುವತಿ ಕುಳಿತು ಸಂಕೇತದಿಂದ ಚಿತ್ರಿಸಿದೆ. ತನ್ನ ಒಡಲಾಳದಲ್ಲಿ ಅನೇಕ ಕನಸುಗಳನ್ನು ಹೊಂದಿದ್ದರೂ ಯೌವ್ವನಾವಸ್ಥೆಯಲ್ಲಿ ಹೆಣ್ಣಿನ ವ್ಯಾಮೋಹಕ್ಕೆ ಸಿಲುಕಬೇಕಾಯಿತು ಎಂಬ ದುಗುಡ ಕಾಣುತ್ತದೆ. ಜ್ಞಾನದ ಮೂಲಕ ಏನೆಲ್ಲಾ ಸಾಧಿಸಲು ಪ್ರಯತ್ನಿಸಿದರೂ ಹೆಣ್ಣು ಆತನ ಮನದಲ್ಲಿ ಮನೆಮಾಡಿರುವುದರಿಂದ ಸಾಧನೆ ಶೂನ್ಯದತ್ತ ಸಾಗುವುದು ಎಂಬುದಾಗಿ ತಿಳಿಸಲಾಗಿದೆ.

**೧೭. ಗಣೇಶ ದುರ್ಗಿಯ ಅವತಾರ**

ಭಾರತೀಯ ಪರಂಪರೆಯಲ್ಲಿ ಸಾಂಪ್ರದಾಯಿಕ ನೀತಿ ನಿಯಮಗಳು ಆಚರಣೆಗಳು ಧಾರ್ಮಿಕ ವಿಧಿವಿಧಾನಗಳನ್ನು ಹೆಚ್ಚಾಗಿ ಕಾಣಬಹುದು. ದೈವಿಕ ಪರಿಕಲ್ಪನೆಯು ಭಾರತೀಯರಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಅಂದಾನಿಯವರು ಈ ಚಿತ್ರದಲ್ಲಿ ಭಾರತೀಯರು ಪೂಜಿಸಿ ಪ್ರಾರ್ಥಿಸುವ ಗಣೇಶನ ಚಿತ್ರವನ್ನು ಚಿತ್ರಿಸಿದ್ದಾರೆ. ಇಲ್ಲಿ ಅಂದಾನಿಯವರು ಭಾರತೀಯ ಪರಂಪರೆಯ ಗಣಪತಿಗೂ ಹಾಗೂ ಅವರು ಇಲ್ಲಿ ಬಿಡಿಸಿರುವ ಗಣಪತಿಯ ಚಿತ್ರಕ್ಕೂ ಅಗಾಧವಾದ ವ್ಯತ್ಯಾಸವಿರುವುದನ್ನು ಕಾಣಬಹುದಾಗಿದೆ.

ಗಣಪತಿಯ ವಾಹನ ಇಲಿ ಎಂದು ನಮ್ಮ ಪುರಾಣಗಳು ಹೇಳಿವೆ. ಆದರೆ ಅಂದಾನಿಯವರು ಚಿತ್ರದಲ್ಲಿ ಹುಲಿಯನ್ನು ಗಣಪತಿಯ ವಾಹನ ರೂಪದಲ್ಲಿ ಚಿತ್ರಿಸಿದ್ದಾರೆ. ಹಾಗೆಯೇ ದುರ್ಗಿಯ ಅವತಾರವನ್ನು ಹಾಗೂ ಅವಳ ವ್ಯಕ್ತಿತ್ವವನ್ನು ಗಣೇಶನ ರೂಪದಲ್ಲಿ ಅಂದಾನಿಯವರು ಚಿತ್ರಿಸಿರುವುದನ್ನು ಕಾಣಬಹುದಾಗಿದೆ. ಗಣಪತಿಯು ಪುರಾಣದಲ್ಲಿರುವಂತೆ ತನ್ನ ನಿಜರೂಪದಲ್ಲಿ ಒಂದು ಆನೆಯ ಸೊಂಡಿಲನ್ನು ಹೊಂದಿರುವುದು ಕಂಡುಬರುತ್ತೆದೆ. ಆದರೆ ಚಿತ್ರದಲ್ಲಿ ಗಣಪತಿಯು ೪ ಸೊಂಡಿಲುಗಳನ್ನು ಹೊಂದಿರುವುದು ಇಲ್ಲಿನ ಚಿತ್ರದ ವೈಶಿಷ್ಟ್ಯವಾಗಿದೆ ಗಣಪತಿಯನ್ನು ಇಲ್ಲಿ ಉಗ್ರರೂಪದ ದುರ್ಗಿಯ ಅವತಾರದಲ್ಲಿ ಅಂದಾನಿಯವರು ಚಿತ್ರಿಸಿರುವುದು ಅವರ ಕಲಾತ್ಮಕ ಮನೋಭಾವನೆಯನ್ನು ನಮಗೆ ಮೂಡಿಸುತ್ತದೆ. ಕಲೆಯು ವಾಸ್ತವಿಕತೆಯನ್ನು ಮೀರಿ ಕಲ್ಪನೆಯತ್ತ ತೆರಳುತ್ತದೆ. ಎಂಬುದಕ್ಕೆ ಈ ಚಿತ್ರವೇ ಸಾಕ್ಷಿಯಾದಂತಿದೆ ಎಂದು ಹೇಳಿದರೆ ತಪ್ಪಾಗಲಾರದು.

### ೧೮. ವೃದ್ಧಾಪ್ಯ ಗಣಪತಿ

ಈ ರೇಖಾಚಿತ್ರವು ಪೇಪರ್ ಅವಕಾಶದಲ್ಲಿ ಬ್ರಶ್‌ನಿಂದ ರೇಖೆಗಳನ್ನು ಎಳೆಯಲಾಗಿದೆ ಲಯಬದ್ಧ ರೇಖೆಗಳಿಂದಾಗಿ ಕಲಾವಿದನ ರಚನಾ ಸಾಮರ್ಥ್ಯವನ್ನು ತೋರಿಸುತ್ತದೆ. ಕಲಾವಿದರ ಕಲ್ಪನೆಯ ಗಣೇಶನ ಈ ರೇಖಾಚಿತ್ರದಲ್ಲಿ ಗಣೇಶನ ವಿಶಿಷ್ಟ ಪರಿಕಲ್ಪನೆಯನ್ನು ಮೆಚ್ಚುವಂತಹದ್ದೆ. ಈ ರೇಖಾಚಿತ್ರದಲ್ಲಿ ಮೂರು ಸೊಂಡಿಲಿನ್ನು ಹೊಂದಿರುವುದು ವಿಶೇಷ.

ಈ ಚಿತ್ರದಲ್ಲಿ ಏನೆಲ್ಲಾ ಕನಸುಗಳಿದ್ದರೂ ವಯಸ್ಸೆಂಬುದು ತನ್ನಷ್ಟಕ್ಕೆ ತಾನೇ ಇಳಿಮುಖವಾಗುತ್ತದೆ. ಇಲ್ಲಿ ಗಣಪತಿಗೆ ವೃದ್ಧಾಪ್ಯ ಬಂದಂತೆ ಚಿತ್ರಿಸಲಾಗಿದೆ. ದೊಡ್ಡ ಹೊಟ್ಟೆಯನ್ನು ಹೊಂದಿದ್ದರೂ ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ ಎಂಬ ಚಿಂತೆಯನ್ನೂ ಕಾಣಬಹುದು. ಪ್ರತಿಯೊಂದು ಜೀವಿಗೂ ಹುಟ್ಟು, ಬಾಲ್ಯ, ಯೌವ್ವನ, ಮುಪ್ಪು ಎಂಬ ಪ್ರಕ್ರಿಯೆಗಳು ನಡೆಯುತ್ತವೆ. ಅದರ ಅಧೀನದಲ್ಲಿರುವ ಮಾನವ ಇರುವುದರೊಳಗೆ ಏನಾದರೂ ಸಾಧಿಸಬೇಕೆಂಬ ಸಂದೇಶವಿದೆ. ವಯಸ್ಸಾದ ನಂತರ ಚಿಂತಿಸಿ ಫಲವಿಲ್ಲ ಎಂಬುದನ್ನು ಸೂಚಿಸುತ್ತದೆ. ದೈಹಿಕ ನೋವು, ನಲಿವು, ಸವಕಳಿ, ವೃದ್ಧಾಪ್ಯದಂತಹ ಜೀವಿಗಳ ಸಹಜ ಚಟುವಟಿಕೆಗಳನ್ನು ದೈವಸ್ವರೂಪಿಯಾದ ಗಣಪತಿಗೆ ಆರೋಪಿಸಿ ಚಿತ್ರಿಸಿರುವದು ಇಲ್ಲಿನ ವಿಶೇಷತೆಯಾಗಿದೆ.

ಪ್ರತಿಯೊಬ್ಬ ಮನುಷ್ಯನಿಗೆ ವೃದ್ಧಾಪ್ಯದಲ್ಲಿ ಹಳೆಯ ನೆನಪುಗಳು ಕಾಡುವುದು ಸಹಜ. ಅದರಲ್ಲಿ ಕೆಲವು ನೆನಪಿಲ್ಲದಿರಬಹುದು. ಆದರೆ ವಯಸ್ಸಾದಂತೆ ಏಕಾಂಗಿತನ, ಒಂಟಿತನ, ಕಾಡುತ್ತಿರುತ್ತದೆ. ಯೌವ್ವನದಲ್ಲಿ ಕಾದಾಡಿದಂತೆ ಮುಪ್ಪಿನಲ್ಲಿ ಕಾದಾಡಲು ಸಾಧ್ಯವಿಲ್ಲ. ಕುಳಿತ ಜಾಗದಿಂದಲೇ ಎಲ್ಲದಕ್ಕೂ ಅನುಭವದ ಹಿನ್ನೆಲೆಯಲ್ಲಿ ಸಲಹೆಗಳನ್ನು ನೀಡುವನು. ಮುಪ್ಪಿನ ಕಾಲದಲ್ಲಿ ಒಂಟಿತನದಿಂದ ಬಳಲುವಾಗ ತನ್ನ ಯೌವ್ವನದ ಸಂದರ್ಭವನ್ನು ಅವಲೋಕಿಸುವ ಪ್ರಮೇಯವನ್ನು ಈ ಚಿತ್ರದಲ್ಲಿ ಹಿಡಿದಿಡಲಾಗಿದೆ. ಅಂದಿನ ಪ್ರೀತಿ, ಪ್ರೇಮ, ಪ್ರಣಯಗಳನ್ನು ಮೆಲುಕು ಹಾಕುತ್ತಿರುವ ಸನ್ನಿವೇಶಗಳನ್ನು ಈ ಚಿತ್ರ ಮನಗಾಣಿಸುತ್ತದೆ. ಸೂರ್ಯಕಾಂತಿಯ ಹೂವಿನ ಮುಖದ ಚಿತ್ರವು ಅರಳಿದಂತೆ ಯೌವ್ವನದ ಯುವತಿಯ ಮುಖದ ಕಾಂತಿಯನ್ನು ಸವಿದ ಸಂದರ್ಭವನ್ನು ನೆನಪಿಸುವಂತಿದೆ.



1. ಅಂತಿಮ ರಾಗ



2.ಟಿ.ವಿ ವೀಕ್ಷಿಸುತ್ತಿರುವ ದೃಶ್ಯ



3. ಗಾಂಧೀಜಿಯವರ ಶ್ರದ್ಧಾಂಜಲಿ ಕಾರ್ಯಕ್ರಮ



4. ನನ್ನ ಹಳ್ಳಿಯ ಮನೆ ಮಿಶ್ರಮಾಧ್ಯಮ



5. ಪ್ರೀತಿಗಾಗಿ ಅರ್ಜಿ ನಿರಾಕರಣೆ



6. ವಚನ ಪಠಣ (ಬಸವಣ್ಣ)



7. ಲೇಡಿ ಪ್ರೀತಿ ತೋರಿಸು 11/15 2009



8. ವೃದ್ಧಾಪ್ಯದಲ್ಲಿ ಹಳೆಯ ನೆನಪುಗಳು ಅಕ್ರಾಲಿಕ್ 3x3



9. ನಗರದ ಮಹಿಳೆಯ ಕನಸು ಅಕ್ರಾಲಿಕ್ 12x8



**10. ಕನಸಿನ ಕೋಟೆ ಜಲವರ್ಣ 18x19 1978**



11. ತಮಾಷೆಯಲ್ಲಿ ತೊಡಗಿರುವುದು, ಜಲವರ್ಣ 11x14 1990



12. ಪ್ರೇಮ ಸಂವಾದ (1) 2009



13. ಪ್ರೇಮ ಸಂವಾದ (2)



14. ಪ್ರೇಮ ಸಂವಾದ (3) ಜಲವರ್ಣ 2002



15. ಗೂಳಿ ಸವಾರಿ (4) 1995



16. ಪ್ರೇಮ ಮರಾಣ ಓದುವದು 2009

17. ಗಣೇಶ ದುರ್ಗಿಯ ಅವತಾರ



18. ವೃದ್ಧಾಪ್ಯ ಗಣಪತಿ



19. ಡಾ. ರಾಜಕುಮಾರ ಶ್ರದ್ಧಾಂಜಲಿ

## ೧೯. ಡಾ. ರಾಜ್‌ಕುಮಾರ್ ಅವರಿಗೆ ಶ್ರದ್ಧಾಂಜಲಿ

ಅಂದಾನಿಯವರು ಡಾ. ರಾಜ್‌ಕುಮಾರ್ ಅವರು ಮರಣ ಹೊಂದಿದ ನಂತರ ಶ್ರದ್ಧಾಂಜಲಿ ಸಲ್ಲಿಸಲು ಅವರ ಭಾವಚಿತ್ರವನ್ನು ಡಿಜಿಟಲ್ ಪ್ರಿಂಟ್ ಮೂಲಕ ಮುದ್ರಿಸಿ ಹಾಕಿದರು. ಆದರೆ ಕಲೆಯನ್ನು ಎತ್ತಿಹಿಡಿಯುವ ಹಿನ್ನೆಲೆಯಲ್ಲಿ ತಮ್ಮ ಕುಂಚದ ಮೂಲಕ ಡಾ. ರಾಜ್‌ಕುಮಾರ್ ಮತ್ತು ಆ ಸಂದರ್ಭದಲ್ಲಿ ಮರಣ ಹೊಂದಿದವ ಚಿತ್ರಗಳನ್ನು ಬಿಡಿಸಿ ಶ್ರದ್ದಾಂಜಲಿ ಸಲ್ಲಿಸಿದರು. ಈ ಚಿತ್ರದಲ್ಲಿ ಡಾ. ರಾಜ್‌ಕುಮಾರ್ ಅವರ ಸತ್ಯನಿಷ್ಠೆ, ಪ್ರಾಮಾಣಿಕತೆ ಮತ್ತು ಅವರ ಸಾಧನೆ ಅವರು ಹತ್ತಿದ ಮೆಟ್ಟಿಲುಗಳು ಅವರ ನಿಲುವುಗಳನ್ನು ಹಿಡಿದಿಡಲಾಗಿದೆ. ಇದು ಕಲಾವಿದರು ಕಲಾವಿದರಿಗೆ ಸಲ್ಲಿಸುವ ಗೌರವವನ್ನು ಸೂಚಿಸುತ್ತದೆ. ಡಾ. ರಾಜ್‌ಕುಮಾರ್ ಅವರ ಶ್ರದ್ದಾಂಜಲಿ ಸಂದರ್ಭದಲ್ಲಿ ನಡೆದ ಕಲಾವಿದರ ಸಮ್ಮೇಳನದಲ್ಲಿ ವಿ.ಟಿ. ಕಾಳೆ, ಜಿ.ಎಸ್. ಖಂಡೇರಾವ್, ಕೆ.ಎನ್. ರಾಮಚಂದ್ರನ್ ಮುಂತಾದವರ ಜೊತೆಗೆ ವ್ಹಿ.ಜಿ ಅಂದಾನಿಯವರೂ ಭಾಗವಹಿಸಿ ಕಲಾಕೃತಿ ಚಿತ್ರಿಸಿದರು.

## ೪.೧೧. ಟೈಪಿಂಗ್ ಮಷಿನ್

**ಪೀಠಿಕೆ**

ಕಾಲದಿಂದ  ಕಾಲಕ್ಕೆ ಅನೇಕ ವ್ಯತ್ಯಾಸಗಳು ಸ್ಥಿತ್ಯಂತರಗಳು ಉಂಟಾಗುತ್ತವೆ. ಅಲದೇ ಪರಿಣಾಮಗಳು ಬೀರುತ್ತವೆ. ಅಂದಾನಿಯವರು. ಕಂಪ್ಯೂಟರ್ ಪ್ರವೇಶಕ್ಕಿಂತ ಮುಂಚೆ ಇದ್ದ ಜನಸಾಮಾನ್ಯರಲ್ಲಿ ಮನೆ ಮಾಡಿದ್ದ ಟೈಪಿಂಗ್ ಮಿಶಿನ್‌ನ ಅವನತಿಯನ್ನು ಕುರಿತು ಗಮನ ಸೆಳೆಯುತ್ತಾರೆ. ಹೆಚ್ಚು ಕಡಿಮೆ ಎರಡು ಸಾವಿರ ದಶಕದವರೆಗೆ ಯಾವುದೇ ವಿಷಯವನ್ನು ಮುದ್ರಿಸಬೇಕಾದರೆ ಟೈಪಿಂಗ್ ಮಾಡಿದ ನಂತರ ಟೈಪಿಂಗ್ ಮಾಡಲಾಗುತ್ತಿತ್ತು. ಆಧುನಿಕತೆಯ ಪ್ರಭಾವದಿಂದಾಗಿ ಕಂಪ್ಯೂಟರ್‌ನ ಹಾವಳಿ ಹೆಚ್ಚಾದಂತೆ ಅಲ್ಲದೇ ಹೊಸ ಹೊಸ ತಂತ್ರಜ್ಞಾನದ ಪ್ರಭಾವಕ್ಕೆ ಸಿಲುಕಿ ಹಳೆಯ ತಲೆಮಾರಿನಿಂದ ಉಳಿದುಕೊಂಡು ಬಂದಿರುವ ಟೈಪಿಂಗ್ ಮಿಶನ್ ತನ್ನ ಅಸ್ತಿತ್ವವನ್ನು ಕಳೆದುಕೊಂಡಿರುವ ಬಗ್ಗೆ ತಮ್ಮ ಚಿತ್ರಕಲೆಯನ್ನು ಅತ್ಯಂತ ಮನೋಜ್ಞವಾಗಿ ಚಿತ್ರಿಸಲಾಗಿದೆ. ಆಧುನಿಕ ತಂತ್ರಜ್ಞಾನದ ಪ್ರಭಾವವಾಗಿದೆ.

## ೧. ಟೈಪಿಂಗ್ ಮಿಷನ್ (ಬೆರಳಚ್ಚು ಯಂತ್ರ)

ವಿಜ್ಞಾನ ಹಲವಾರು ಆವಿಷ್ಕಾರಗಳನ್ನು ಮಾಡಿಕೊಂಡು ಬಂದಿದೆ. ಅದರಲ್ಲಿ ಮುಖ್ಯವಾಗಿ ಅಕ್ಷರ, ಮುದ್ರಣ ಮಾಡಲು ಹೊಸ ಸಂಶೋಧನೆ ಪ್ರಯುಕ್ತ ಅಸ್ತಿತ್ವಕ್ಕೆ ಬಂದಿದ್ದೇ ಟೈಪಿಂಗ್ ಮಿಷನ್. ಇದಕ್ಕೂ ಮೊದಲು ಕಲ್ಲು, ಕಟ್ಟಿಗೆ, ಕಂಚು, ತಾಮ್ರ, ತಾಳೆಗರಿ ಮುಂತಾದವುಗಳ ಮೇಲೆ ಅಕ್ಷರಗಳನ್ನು ಬರೆಯಲಾಗುತ್ತಿತ್ತು. ಕಾಲಾಂತರದಲ್ಲಿ ವಿಜ್ಞಾನದ ಹೊಸ ಆವಿಷ್ಕಾರದ ಫಲವಾಗಿ ಚಾಲನೆಗೆ ಬಂದ ಟೈಪಿಂಗ್ ಮಿಷನ್ ಅಕ್ಷರ ಮುದ್ರಣದಲ್ಲಿ ಕ್ರಾಂತಿ ಮಾಡಿತು. ಬಹುತೇಕವಾಗಿ ಎಲ್ಲಾ ಸರಕಾರಿ ಹಾಗೂ ಇತರೆ ಕಛೇರಿಗಳಲ್ಲಿ ಟೈಪಿಂಗ್ ಮಿಷನ್ ಅನ್ನು ಬಳಸಲಾಗುತ್ತಿತ್ತು. ಇದರ ಪ್ರಭಾವವನ್ನು ವರ್ತಮಾನದ ಸಂದರ್ಭದಲ್ಲೂ ಕಾಣಬಹುದಾಗಿದೆ. ಆಧುನಿಕ ಯುಗ, ಕಂಪ್ಯೂಟರ್ ಯುಗ ಎಂದು ಕರೆಯುವ ಇಂದಿನ ಕಾಲದಲ್ಲಿ ವಿದ್ಯುತ್ ಇಲ್ಲದ ಸಂದರ್ಭದಲ್ಲಿ ಆಪತ್ಬಾಂಧವನಂತೆ ಸಹಾಯಕ್ಕೆ

ಬರುವುದೇ ಟೈಪಿಂಗ್ ಮಿಷನ್ ಎಂಬುದು ಗಮನಾರ್ಹ. ಆದರೆ ಅಧುನಿಕತೆಯ ಓಟದಲ್ಲಿ ಟೈಪಿಂಗ್ ಮಿಷನ್ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ. ಅಂದು ಬಹುತೇಕ ಜನರಿಗೆ ಉದ್ಯೋಗವನ್ನು ನೀಡಿತ್ತು. ಕಂಪ್ಯೂಟರ್ ಪ್ರಭಾವ ಹೆಚ್ಚಾಗಿರುವುದರಿಂದ ಟೈಪಿಂಗ್ ಮಿಷನ್ ಬಳಕೆ ಇಲ್ಲದ್ದನ್ನು ಈ ಚಿತ್ರದಲ್ಲಿ ಕಾಣಬಹುದು. ಹಾಗಾಗಿ ಅದನ್ನು ಬಳಸುವ ಜನರು ಒಂದು ಹಂತದಲ್ಲಿ ಇಕ್ಕಟ್ಟಿಗೆ ಸಿಲುಕಿದ್ದರು.

**೨. ಮುದ್ರಣ ಮಾಧ್ಯಮದಲ್ಲಿ ಟೈಪಿಂಗ್ ಮಿಷನ್ (ಬೆರಳಚ್ಚು ಯಂತ್ರ)**

ಅಂದು ಪತ್ರಿಕೆಗಳನ್ನು ಪ್ರಕಟಿಸಲು ಕೈಬರಹಗಳನ್ನೇ ಬಳಸಲಾಗುತ್ತಿತ್ತು. ವಿಜ್ಞಾನದ ಪ್ರಯೋಗದಿಂದ ಟೈಪಿಂಗ್ ಮಿಷನ್ ಮೂಲಕ ಅಕ್ಷರಗಳನ್ನು ಮುದ್ರಿಸುವ ಕಾಲ ಆರಂಭವಾಯಿತು. ಬಹುತೇಕವಾಗಿ ಟೈಪ್ ಮಾಡಿದ ಅಕ್ಷರಗಳು ಪತ್ರಿಕೆಗಳಲ್ಲಿ ಮುದ್ರಣಗೊಂಡು ಹಂತಹಂತವಾಗಿ ಅಚ್ಚು ಮೊಳೆಗಳ ಮೂಲಕ ಮುದ್ರಿಸಲಾಗುತ್ತಿತ್ತು. ಆ ಸಂದರ್ಭದಲ್ಲಿ ಟೈಪಿಂಗ್ ಮತ್ತು ಮೊಳೆಗಳ ಅಕ್ಷರ ಜೋಡಣೆ ಪೈಪೋಟಿ ಇದ್ದರೂ ಜನರ ಬಳಿ ತಲುಪಿರುವುದು ಟೈಪಿಂಗ್ ಮಿಷನ್ ಎಂದೇ ಹೇಳಬಹುದು. ಇಂತಹ ತಂತ್ರಜ್ಞಾನ ವರ್ತಮಾನದ ಸಂದರ್ಭದಲ್ಲಿ ಕಂಪ್ಯೂಟರೀಕರಣದ ಪ್ರಭಾವದಿಂದ ಸೊರಗಿಹೋಗಿದೆ. ಇಂದು ಎಲ್ಲಾ ಕ್ಷೇತ್ರಗಳಲ್ಲೂ ಇದರ ಜಾಗದಲ್ಲಿ ಕಂಪ್ಯೂಟರ್ ಸ್ಥಾನ ಪಡೆದಿದೆ. ಪತ್ರಿಕಾ ಮಾಧ್ಯಮದಲ್ಲಿ ಇದರ ಪ್ರಭಾವ ಹೆಚ್ಚಾಗಿಯೇ ಇದೆ. ಅಲ್ಲದೇ ಟಿವಿ ಮಾಧ್ಯಮಗಳಲ್ಲೂ ಇದರ ಪ್ರಭಾವವನ್ನು ನೋಡಬಹುದು. ಆದರೆ ಟೈಪಿಂಗ್ ಮಿಷನ್ ಹಳೆಯ ಕಾಲದ ೭೦-೮೦ರ ದಶಕದ ಚಲನಚಿತ್ರಗಳಲ್ಲಿ ದೃಶ್ಯದ ರೂಪದಲ್ಲಿ ಕಾಣಬಹುದು ಇಂದಿನ ಚಲನಚಿತ್ರಗಳಲ್ಲಿ ಕಂಪ್ಯೂಟರಿನ ಹಾವಳಿ ಹೆಚ್ಚಾಗಿದೆ. ಇದಕ್ಕೆ ಹಲವಾರು ಉದಾಹರಣೆಗಳು ಸಿಗುತ್ತವೆ. ಇದರಿಂದ ಟೈಪಿಂಗ್ ಮಿಷನ್ನಿನ ಸ್ಥಾನ ನಶಿಸಿಹೋಗುತ್ತಿದೆ ಎಂದರೆ ತಪ್ಪಾಗಲಾರದು. ಇದನ್ನು ಚಿತ್ರದ ಮೂಲಕ ಬಿಂಬಿಸಲಾಗಿದೆ.

**೪.೧೨. ಭಿತ್ತಿ ಚಿತ್ರಗಳು**

**೧. ಮಿನಿ ವಿಧಾನಸೌಧದಲ್ಲಿ ಭಿತ್ತಿಚಿತ್ರ**

ಕಲಾಕ್ಷೇತ್ರ ಗುಲಬರ್ಗಾ ಇಷ್ಟೊಂದು ವ್ಯಾಪಕವಾಗಿ ಬೆಳೆಯುತ್ತಿರುವಾಗ ಇವುಗಳ ಸದುಪಯೋಗವಾಗಬೇಕು ಹಾಗೂ ಸಾರ್ವಜನಿಕರು ವೀಕ್ಷಿಸುವಂತ ಸ್ಥಳಗಳಲ್ಲಿ ಪ್ರದರ್ಶನಕ್ಕೆ ಅವಕಾಶ ಅಗತ್ಯ. ಗುಲಬರ್ಗಾ ಬೃಹತ್ ಕಟ್ಟಡಗಳಲ್ಲಿ ಅತ್ಯಂತ ಆಕರ್ಷಕವಾದದ್ದು ಮಿನಿ ವಿಧಾನಸೌಧ ಮುಂಭಾಗದ ಮೆಟ್ಟಲೇರಿ ಒಳ ಪ್ರವೇಶಿಸಿದರೆ, ಸಂಭಾಂಗಣ ಪ್ರವೇಶಿಸುತ್ತಿರುವಂತೆಯೇ ಬೃಹತ್ ಆಕರ್ಷಕ ಶೈಲಿ ಭಿತ್ತಿಚಿತ್ರ(ಮ್ಯೂರಲ್ಸ) ಇದಾಗಿದೆ.

ಕಲಾವಿದ ವ್ಹಿ.ಜಿ ಅಂದಾನಿಯವರು ರಚಿಸಿದ ಈ ದೊಡ್ಡ ಭಿತ್ತಿಚಿತ್ರ ಮುಖ್ಯವಾಗಿ ಭಾರತಿಯ ಸಂಸ್ಕೃತಿಯ ಇತಿಹಾಸ, ತ್ಯಾಗ, ಶಿಕ್ಷಣ ಬಿಂಬಿಸುವ ಹಿನ್ನೆಲೆಯಲ್ಲಿ ರಚಿತಗೊಂಡಿದೆ. ಸಿಮೆಂಟ್ ಗೋಡೆಯ ಮೇಲೆ ಬಿಳಿ ಅಕ್ರಾಲಿಕ್ ಎಮ್ಲಷನ್ ಬಳಿದು ನಂತರ ಆಕೃತಿಗಳನ್ನು ರಚಿಸಿ ಆದಾದ ನಂತರ ಆಕ್ರಾಲಿಕ್ ವರ್ಣಗಳಿಂದ ಪೂರ್ತಿಗೊಳಿಸಲಾಗಿದೆ. ಆಕ್ರಾಲಿಕ್ ವರ್ಣಗಳು ಪ್ಲಾಸ್ಟಿಕ್ ಗುಣ ಹೊಂದಿರುವುದರಿಂದ ಬಹುಕಾಲ ಬಾಳಿಕೆ ಬರಲಿದೆ.

ಆಕೃತಿಯ ಮಾಧ್ಯದಲ್ಲಿ ದಟ್ಟನೆ ಕೆಂಪು ವರ್ಣದ ಅವಕಾಶವಿದೆ. ಬಹುಶಃ ಇದು ಈ ಭಾಗದ ಬಿಸಿಲು ಹಾಗೂ ಬರಡನ್ನು ಬಿಂಬಿಸಿರುತ್ತಿರಬೇಕು ಅದಲ್ಲಿ ಊಯಾಲೆ ಆಡುವ ಮಹಿಳೆ, ಅದರ ಮೇಲೆ ಬೌದ್ದ ಧರ್ಮದ ಸಂಕೇತ ಸ್ತೂಪಗಳು ಅಲ್ಲಿಯ ಹಸನ್ಮುಖಿಯಾಗಿರುವ ಗೌತಮ ಬುದ್ಧ, ಮಾಹಾವೀರ, ಶಿವಶರಣರು, ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ, ಇವರಲ್ಲದೇ ಈ ಭಾಗದ ಮಹಾನ್ ವಾಸ್ತುಶಿಲ್ಪಗಳು ಹಾಗೂ ಯಾತ್ರಾಸ್ಥಳದ ಶರಣಬಸವೇಶ್ವರ ಮಂದಿರ, ಖಾಜಾ ಬಂದೇನಾಮಾಜ ದರ್ಗಾ, ಕೋಟೆ, ಕಮಾನುಗಳಿಂದ ಈ ಭಾಗದ ನಿತ್ಯ ಬದುಕಿನಲ್ಲಿ ಹರಡಿರುವ ಕುದುರೆ, ಟಾಂಗಾ, ಪ್ರಕೃತಿ ಇಲ್ಲಿ ಗಟ್ಟಿತನದ ಸಂಕೇತಗಳನ್ನು ತೋರಿಸುವ ಗೂಳಿ ಕೃತಿಯ ಜೀವಾಳವಾಗಿದೆ.

ಇದರೊಂದಿಗೆ ಭಾರತೀಯ ಮಹಾನ್ ನಾಯಕರಾದ ಡಾ. ಅಂಬೇಡ್ಕರ್, ನೆಹರು. ಇಂದಿರಾಗಾಂಧಿಯವರು ಭಾವಚಿತ್ರಗಳು ಹಾಗೂ ಗಾಂಧೀಜಿಯವರನ್ನು ಬಾಲಕ ಕರೆದೊಯ್ಯುತ್ತಿರುವ ಚಿತ್ರ ಅಜಂತಾ ಪಡೆಯಚ್ಚು ಹಾರುತ್ತಿರುವ ಬಿಳಿಯ ಪಾರಿವಾಳಗಳು ಸ್ವತಂತ್ರವನ್ನು ಸೂಚಿಸುತ್ತವೆ. ಇದರೊಂದಿಗೆ ವಿಶ್ವವಿದ್ಯಾಲಯದ ಕಾಲೇಜು ವಿದ್ಯಾರ್ಥಿಗಳು ಈ ಭಾಗದ ಸಮಗ್ರ ಚಿಂತಾ ಬಿಂಬಿಸುವಂಥವುಗಳಾಗಿವೆ.

**೨ ರಾಜೆಶ್ರೀ ಸಿಮೆಂಟ್ ಆವರಣದಲ್ಲಿರುವ ಪ್ರತಿಷ್ಠಾಪನ ಕಲೆ**

ರಾಜೆಶ್ರೀ ಸಿಮೇಂಟ್ ಫ್ಯಾಕ್ಟರಿಯ ಆವರಣದಲ್ಲಿರುವ ರಚಿಸಲಾದ ಪ್ರತಿಷ್ಠಾಪನ ಕಲೆ ಇಲ್ಲಿ ಕಲಾವಿದರಾದ ವ್ಹಿ.ಜಿ.ಅಂದಾನಿಯವರು ಹಲವಾರು ಕಬ್ಬಿಣದ ಬಿಡಿಭಾಗಗಳನ್ನು ಜೋಡಿಸಿ ವಾಹನದ ರೂಪ ಕೊಟ್ಟಿರುವುದು ಕಂಡುಬರುತ್ತಿದೆ. ಇಲ್ಲಿ ದೊಡ್ಡ ದೊಡ್ಡ ಕಬ್ಬಿಣದ ಚಕ್ರಗಳು ಸ್ಟೇರಿಂಗ್ ಮತ್ತು ಟಪ್ಪಾದ ಆಕಾರ ಹೋಲುವಂತೆ ರಚಿಸಿದ್ದಾರೆ. ಹಲವಾರು ಕಬ್ಬಿಣದ ಕಚ್ಚಾ ವಸ್ತುಗಳನ್ನು ಬಳಸಿಕೊಂಡು ಈ ವಾಹನವನ್ನು ನಿರ್ಮಿಸಿದ್ದಾರೆ.

**ಉಪಸಂಹಾರ**

ವ್ಹಿ.ಜಿ ಅಂದಾನಿಯವರು ಚಿತ್ರಗಳನ್ನು ಬಿಡಿಸುವಾಗ ಅವರ ಮನಸ್ಸಿನಲ್ಲಿ ಸಾಮಾಜಿಕ ಕಾಳಜಿ ಇರುತ್ತದೆ ಎಂಬ ಈ ಮೇಲಿನ ವಿಚಾರಗಳಿಂದ ತಿಳಿದು ಬರುತ್ತದೆ. ಸ್ಥೂಲಕಾಯದ ಮಹಿಳೆ, ಗೂಳಿ, ಸಂವಾದ, ವೈಭವ, ಭಗವಾನರ ಭಾವ ಚಿತ್ರಗಳು, ಗಣಪತಿ, ಪ್ರಕೃತಿ, ವಸಂತ, ಟೈಪಿಂಗ್, ಹಾಗೂ ಸಂಕೀರಣ ಚಿತ್ರಗಳು ಅಂಶಗಳ ಮೂಲಕ ಗುಲಬರ್ಗಾದಲ್ಲಿ ಸಮಕಾಲೀನ ಸಂದರ್ಭದಲ್ಲಿ ನಡೆದ ಸಂಗತಿಗಳನ್ನು ತಮ್ಮ ಚಿತ್ರಕಲೆಯ ಮೂಲಕ ಅಭಿವ್ಯಕ್ತ ಪಡಿಸಿರುವುದು. ಕಲೆಯ ಪ್ರಾಮುಖ್ಯತೆಯನ್ನು ಎತ್ತಿ ತೋರಿಸಿದಂತಾಗಿದೆ.

**ಟಿಪ್ಪಣಿ**

೩೬. ಎನ್.ಮರಿಶಾಮಾಚಾರ್ (ಸಂ), ಕಲಾಕೋಶ, ಪುಟ.೩೦೫.೩೦೬

೩೭. ರೇಖಾಚಿತ್ರ ಬಿ.ಕೆ.(ಸಂ), :ರೇಖಾ ಚಿತ್ರ, ಪು.೧

೩೮. ಚಿ.ಸು.ಕೃಷ್ಣಶಟ್ಟಿ, :ಚಿತ್ರ ಚಿತ್ತ, ಪು.೯೯

೩೯. ಚಿ.ಸು.ಕೃಷ್ಣಶಟ್ಟಿ; ಚಿತ್ರ ಚಿತ್ತ, ಪು.೯೯



1. ಟೈಪಿಂಗ್ ಮಷಿನ, ಅಕ್ರಾಲಿಕ




2. ಟೈಪಿಂಗ್ ಮಷಿನ, ಅಕ್ರಾಲಿಕ



1. ಮಿನಿ ವಿಧಾನ ಸೌಧದಲ್ಲಿ ಭಿತ್ತಿ ಚಿತ್ರ (ಗುಲಬರ್ಗಾ)



2. ರಾಜೇಶ್ರೀ ಸಿಮೆಂಟ್ ಫ್ಯಾಕ್ಟರಿ (ಮಳಖೇಡ)



ಭಿತ್ತಿ ಚಿತ್ರ ( ವ್ಹಿ.ಜಿ.ಅಂದಾನಿಯವರ ಮನೆ)



ಅಧ್ಯಾಯ –೫

# ಕಲಾಶೈಲಿ. ಪ್ರಭಾವ, ಪ್ರೇರಣೆ ಮತ್ತು ತಂತ್ರಗಾರಿಕೆ

೫.೧. ಶೈಲಿ

೫.೨. ಪ್ರಭಾವ

೫.೩. ಪ್ರೇರಣೆ

೫.೪. ತಂತ್ರಗಾರಿಕೆ

೫.೫. ರೇಖಾಚಿತ್ರ ರಚಿಸುವ ವಿಧಾನ

೫.೬. ಕಲಾಕೃತಿ ಮಾಡುವ ತಂತ್ರ

## ಅಧ್ಯಾಯ-ಐದು

# ಕಲಾಶೈಲಿ, ಪ್ರಭಾವ, ಪ್ರೇರಣೆ ಮತ್ತು ತಂತ್ರಗಾರಿಕೆ

### ೫.೧ ಶೈಲಿ

ಶೈಲಿ ಎಂದರೇನು ಎಂಬುದನ್ನು ಸೂತ್ರರೂಪದಲ್ಲಿ ಹೇಳುವುದು ಕಷ್ಟಸಾಧ್ಯ. ಶೈಲಿಯ ಸ್ವರೂಪದ ಬಗ್ಗೆ ಬೇರೆಬೇರೆ ಕಾಲಘಟ್ಟಗಳಲ್ಲಿ ಹಲವಾರು ವಿದ್ವಾಂಸರು ವ್ಯಾಖ್ಯಾನಗಳನ್ನು ಮತ್ತು ವಿವರಣೆಗಳು ಹಲವು ಬಗೆಗಳಲ್ಲಿ ಕೊಟ್ಟಿದ್ದಾರೆ. ಅವುಗಳನ್ನು ಪರಿಶೀಲಿಸಿದ ಮೇಲೆ ಶೈಲಿಯನ್ನು ಕುರಿತು ಕೆಲವು ಪ್ರಧಾನ ದೃಷ್ಟಿಗಳನ್ನು ಗುರುತಿಸಬಹುದು. ಸಾಹಿತ್ಯ ಮತ್ತು ಕಲೆಯ ವಿಮರ್ಶೆಯ ಸಂಬಂಧದಲ್ಲಿ ಶೈಲಿ ಎಂಬ ಮಾತು ಪದೆ ಪದೆ ಬರುತ್ತದೆ. ಈ ಕಾವ್ಯ ಶೈಲಿ ಚೆನ್ನಾಗಿದೆ. ಈ ಮೂರ್ತಿ ಚಾಲುಕ್ಯ ಶೈಲಿಯದು. ಈ ಚಿತ್ರ ರಚನೆಯಲ್ಲಿ ಲೇಪಿಸಿರುವ ಬಣ್ಣವು ರೆಂಬ್ರಾಂಟನ ಶೈಲಿಯದು. ಇದು ಹೊಯ್ಸಳ ಶೈಲಿಯ ದೇವಸ್ಥಾನ ಹೀಗೆ ಶೈಲಿ ಹೇಗೆ ರುಪಗೊಳ್ಳುತ್ತದೆ ಎಂಬದು ಕುತೂಹಲ ಹುಟ್ಟುತ್ತದೆ.

ಕಲಾವಿದನ ಶೈಲಿ ಹೇಗೆ ರೂಪಗೊಳ್ಳುತ್ತದೆ ಎಂಬುದು ಒಂದು ಮುಖ್ಯ ಪ್ರಶ್ನೆ. ಇಲ್ಲಿ ಶೈಲಿಯಂದರೆ ಭಾವನೆಗಳು ಕಲಾವಿದನ ಮನಸ್ಸಿನಲ್ಲಿ ರೇಖೆ, ಬಣ್ಣಗಳ ಸ್ವಚ್ಛಂದ ಹರಿದಾಟ ಅವನ ಮನಸ್ಸಿನಲ್ಲಿ ಮೂಡುತ್ತದೆ. ಹಿಂದಿನ ಕಲಾವಿದರ ಅಭ್ಯಾಸದಿಂದ ಶ್ರೇಷ್ಠತಮ ಕಲಾವಿದರ ಅಭಿವ್ಯಕ್ತಿಯ ಶಕ್ತಿ ಬೆಳೆಯುತ್ತದೆ. ಹೀಗೆ ವಿದ್ವತ್ತು, ಅನುಭವ, ಭಾವ ತೀವ್ರತೆ, ಅಭಿವ್ಯಕ್ತಿಯ ಶಕ್ತಿ, ಕಲೆಯ ಭಂಡಾರ ಹಾಗೂ ಪ್ರತಿಭೆಯ ಸುರಮ್ಯ ಸಮ್ಮೇಳನದಿಂದ ಒಬ್ಬ ಕಲಾವಿದನ ಶೈಲಿ ರೂಪಗೊಳ್ಳುತ್ತದೆ. ಶೈಲಿ ಕಲಾವಿದನನ್ನು ಹಿಂಬಾಲಿಸುವ ಅವನ ಛಾಯೆ. ಕಲಾವಿದನ ಅಭಿವ್ಯಕ್ತಿಯು ಬಣ್ಣ ಅಥವಾ ರೇಖೆಗಳ ಈ ಮಾಧ್ಯಮಗಳು ಅವನು ಎಷ್ಟು ಅರ್ಥವತ್ತಾಗುವಂತೆ, ಪ್ರಭಾವಶಾಲಿಯಾಗುವಂತೆ ಉಪಯೋಗಿಸುತ್ತಾನೋ ಅದನ್ನು ಅನುಸರಿಸಿ ಅವನ ಶೈಲಿ ರೂಪತಾಳುತ್ತದೆ. ಕಲಾವಿದನ ಅನುಭವ, ತಂತ್ರ, ಕೌಶಲ್ಯ, ಪ್ರತಿಭೆ ಅವನ ರಚನಾ ಸಾಮರ್ಥ್ಯವನ್ನು ಶೈಲಿ ಎಂಬರ್ಥದಲ್ಲಿ ಹೇಳಬಹುದು.[೪೦]

ಚಿತ್ರ ರಚನೆಯ ಕಾಲದಲ್ಲಿ ಕಲಾವಿದನಿಗಿರುವ ಮಾನಸಿಕ ಭಾವನೆಗಳಂತೆ ಅವನ ಕಲಾಕೌಶಲ್ಯ ಕೂಡ ಬದಲಾಗುತ್ತದೆ. ಒಂದೊಂದು ಬಗೆಯ ವಿಚಾರಗಳನ್ನು ತಿಳಿಸಲು ಒಂದೊಂದು ಬಗೆಯ ಕೌಶಲ್ಯ ಹಾಗೂ ಶೈಲಿ ಬೇಕಾಗಬಹುದು. ಅದನ್ನು ಕಲಾವಿದ ತಾನಾಗಿಯೇ ತನ್ನ ಮನಸ್ಸಿನ ಭಾವನೆಗಳಿಗೆ ರೂಪಕೊಡಲು ಯೋಗ್ಯವೆನಿಸುವ ಶೈಲಿಯನ್ನು ಪ್ರಯೋಗಿಸುತ್ತಾನೆ. ಮಾನಸಿಕ ಭಾವನೆಗಳನ್ನು

ಹೊರಗೆಡವಲು ಪ್ರತಿಯೊಬ್ಬ ಕಲಾವಿದ ತನ್ನದೇ ಆದ ಶೈಲಿಯನ್ನು ರೂಪಿಸಿ ಗುರುತಿಸಿಕೊಳ್ಳಬೇಕಾಗುತ್ತದೆ. ಈ ಅಭಿಪ್ರಾಯದಂತೆ ಅಂದಾನಿಯವರ ಸಮಗ್ರ ಕಲಾಕೃತಿಗಳ ಅಧ್ಯಯನ ಮಾಡಿದಾಗ ಮೊದಮೊದಲು ಅಕಾಡೆಮಿಕ್ ಕಲಿಕೆಯಲ್ಲಿ ಪಾಶ್ಚಿಮಾತ್ಯ ಕಲೆಯ, ಕಲಾವಿದರ ಹಾಗೂ ಭಾರತೀಯ ಬೇರೆ ಬೇರೆ ಕಲಾಶೈಲಿಯ ಪ್ರಭಾವಕ್ಕೆ ಒಳಗಾಗಿದ್ದರೂ ಸಹ ತದನಂತರ ಪಾಶ್ಚಿಮಾತ್ಯ ಮಾಧ್ಯಮ, ಶೈಲಿ, ರೂಪ, ತಂತ್ರ ಇತ್ಯಾದಿಗಳನ್ನು ನಮ್ಮ ನೆಲದ ಸೊಗಡಿಗೆ ಹೊಂದಿಸುವ ಪ್ರಯತ್ನವನ್ನು ಅಂದಾನಿಯವರು ಮಾಡಿದ್ದಾರೆ. ಅಂತೆಯೇ ಅಲ್ಲಿ ನಮ್ಮ ಭಾವನೆಗಳಿಗೆ ವಸ್ತು ವಿಷಯಗಳಿಗನುಸಾರವಾಗಿ ನವ್ಯ ಶೈಲಿಗೆ ಬದ್ಧರಾಗಿರುವುದು ಕಂಡುಬರುತ್ತದೆ. ಅದರಲ್ಲಿ ಅವರದೇಯಾದ ಕಲಾಶೈಲಿಯನ್ನು ಕಾಣಬಹುದು.

ಪ್ರಸ್ತುತ ಸಂದರ್ಭದಲ್ಲಿ ಹಲವಾರು ಆವಿಷ್ಕಾರದಿಂದಾಗಿ ಈಗಿನ ಸಂದರ್ಭದಲ್ಲಿ ನೈಜ ಕಲೆಗೆ ಅಷ್ಟಾಗಿ ಯಶಸ್ಸು ಸಿಗದಿರುವ ಕಾರಣದಿಂದಾಗಿ ಅಂದಾನಿಯವರು ನೈಜತೆಯನ್ನು ಬಿಟ್ಟು ಈ ನವ್ಯ ಕಲಾಶೈಲಿಯಲ್ಲಿ ಕೃತಿರಚನೆಗೆ ಒಲವು ತೋರಿದರು.

ಅಂದಾನಿಯವರ ಚಿತ್ರಗಳಲ್ಲಿ ರೇಖೆಗೆ ಹೆಚ್ಚು ಪ್ರಾಧಾನ್ಯತೆ ಇದೆ. ಇದರ ಜೊತೆಗೆ ಸಂಯೋಜನೆಯಲ್ಲಿ ವೈವಿಧ್ಯತೆ ಇರುವ ಅಂಶಗಳನ್ನು ಕಾಣುತ್ತೇವೆ. ಆಗಿನ ಸಮಕಾಲೀನ ಚಿತ್ರಗಳಿರುವ ಕೃತಿಗಳು ಅಷ್ಟೇ ಶಕ್ತಿಯುತವಾದ ಕಲಾಕೃತಿಗಳೆಂದು ಹೇಳಬಹುದು. ವಿಷಯಗಳು ಭಿನ್ನತೆಯ ಜೊತೆಗೆ ಇಡೀ ಬದುಕಿನ ಸಂಸ್ಕೃತಿಯ ಅನೇಕ ಬೆಳವಣಿಗೆಯ ಹಂತವನ್ನು ಅಂದಾನಿಯವರ ಕಲಾಕೃತಿಗಳಲ್ಲಿ ಕಾಣುತ್ತೇವೆ. ಇಂತಹ ಬದುಕನ್ನು ಪ್ರತಿಬಿಂಬಿಸುವಂತಹ ಕಲೆ ಅವರದಾಗಿದೆ. ಕಲಾಕೃತಿಗಳು ಆಯಾ ಕಾಲಮಾನವನ್ನು ಪ್ರತಿನಿಧಿಸುತ್ತ ಹೋಗುತ್ತವೆ.

ಒಂದೇ ಅವಕಾಶದಲ್ಲಿ ಅನೇಕ ಜನರ ಆಕೃತಿಗಳನ್ನು ಸ್ಪಷ್ಟವಾಗಿ ಗುರುತಿಸುವ ರೀತಿಯಲ್ಲಿ ಚಿತ್ರಿಸುವುದಲ್ಲದೇ ಪ್ರತಿಯೊಂದು ಆಕೃತಿಯನ್ನು ನಿಖರವಾಗಿ ಸ್ಪಷ್ಟವಾಗಿ ಗುರುತಿಸುವ ರೀತಿಯಲ್ಲಿ ಚಿತ್ರಿಸುವುದು ಇವರ ಇನ್ನೊಂದು ವೈಶಿಷ್ಟ್ಯವಾಗಿದೆ. ಇಂತಹ ಒಂದು ಸಂಯೋಜನಾ ತಂತ್ರ, ಶೈಲಿ ಅವರ ಗುರುಗಳಿಂದಲೇ ಬಂದಂತವುಗಳು. ಒಂದೊಂದು ಆಕೃತಿಯ ಮೇಲೂ ಉಚಿತ ವರ್ಣವನ್ನು ಲೇಪಿಸಿದ್ದಾರೆ ಅಷ್ಟೊಂದು ಆಕೃತಿಗಳಿದ್ದರೂ ಹಿನ್ನೆಲೆ, ಮುನ್ನೆಲೆ ಆಕೃತಿಗಳ ನಡುವೆ ಇರಬೇಕಾದ ಸ್ಥಳ ಅವಕಾಶದ ಕಲ್ಪನೆ ಅದ್ಭುತವಾದದ್ದು

ವೇಷ ಭೂಷಣಗಳು ಅಷ್ಟೇ. ಆಯಾಕಾಲದ ಹಾಗೂ ವ್ಯಕ್ತಿತ್ವಕ್ಕೆ ತಕ್ಕಂತಹ ವೇಷಗಳನ್ನು ಚಿತ್ರಿಸಿದ್ದಾರೆ. ಹೆಚ್ಚಾಗಿ ಕೆಲವು ದಪ್ಪಕಾಯದ ಮಹಿಳೆಯರು, ಉತ್ತರ ಕರ್ನಾಟಕದಲ್ಲಿರುವ ಅದೂ ಗುಲಬರ್ಗಾದ ಪ್ರದೇಶದಲ್ಲಿರುವ ಶಿಲಾಶಾಸನಗಳ ವೈಭವಗಳ ಸರಣಿ ಚಿತ್ರಗಳನ್ನು ಚಿತ್ರಿಸಿದ್ದು ಗಮನಾರ್ಹ. ಗೂಳಿ ಸರಣಿ ಚಿತ್ರಗಳು, ಅಲ್ಲಿಯ ಬಿಸಿಲಿನ ತಾಪ, ಮಹಿಳೆಯರ ಸಂವಾದ ಆ ಪ್ರದೇಶದ ಬಿಸಿಲಿನ ಬೇಗೆ ತಾಳಲಾರದೇ ಮರದ ಕೆಳಗಡೆ ಸಂವಾದ, ಮಕ್ಕಳ ಆಟ ಪಾಠಗಳು ಹೀಗೆ ಆ ಕಾಲದ ಉಡುಗೆ ತೊಡುಗೆ ಜೊತೆಯಲ್ಲಿ ಸಂಸ್ಕೃತಿ ಸಂಪ್ರದಾಯಗಳು ಆಚರಣೆ, ಆಗಿನ ಕಾಲದಲ್ಲಿ ಉಪಯೋಗಿಸುವಂತಹ

ದೈನಂದಿನ ವಸ್ತುಗಳು, ಜನ ಜೀವನದ ಮುಖವನ್ನು ತಮ್ಮ ಕಲಾಕೃತಿಯಲ್ಲಿ ಪ್ರತಿಬಿಂಬಿಸಿದ್ದಾರೆ. ಮೃದು ಮತ್ತು ಪ್ರಖರ ವರ್ಣಗಳನ್ನು ಬಳಸುವುದರೊಂದಿಗೆ ಗಾಢವಾದ ನೆರಳು ಬೆಳಕನ್ನು ಅತ್ಯಂತ ಪ್ರಭಾವಶಾಲಿಯಾಗಿ ರಚಿಸಿದ್ದಾರೆ. ಚಿತ್ರಗಳಲ್ಲಿ ಸೂಕ್ಷ್ಮತೆಯನ್ನು, ಸ್ಪಷ್ಟತೆಯನ್ನು ತೋರಿಸಿದ್ದಾರೆ.

### ೫.೨ ಪ್ರಭಾವ

ಕಲಾ ಪ್ರಪಂಚದಲ್ಲಿ ಅನೇಕ ಕಲಾವಿದರು ತಮ್ಮದೇ ಆದ ಶೈಲಿ ವೈಶಿಷ್ಟ್ಯತೆಯಿಂದ ತಮ್ಮ ಸಮಕಾಲೀನ ಕಲಾವಿದರಿಂದ ಬೇರೆಯೇ ಎನ್ನುವಂತೆ ತಮ್ಮ ಕಲಾಕೃತಿಗಳ ಮೂಲಕ ತಮ್ಮತನವನ್ನು ಅಭಿವ್ಯಕ್ತಪಡಿಸಿದ್ದಾರೆ. ಈ ಪ್ರಪಂಚದ ಎಲ್ಲಾ ಚಿತ್ರ ಕಲಾವಿದರು ಒಂದಿಲ್ಲಾ ಒಂದು ರೀತಿಯಲ್ಲಿ ಒಬ್ಬರು ಇನ್ನೊಬ್ಬರ ಮೇಲೆ ಪ್ರಾರಂಭದ ದಿಶೆಯಲ್ಲಿ ಪ್ರಭಾವ ಬೀರಿರುವುದನ್ನು ಕಾಣುತ್ತೇವೆ. ಕೊನೆಗೆ ತಮ್ಮದೇ ಆದ ಮಾರ್ಗದಲ್ಲಿ ಚಿತ್ರಗಳನ್ನು ಚಿತ್ರಿಸಿ ತಮ್ಮ ಪ್ರತಿಭೆಯನ್ನು ಮೆರೆದು ತಮಗೆ ತಾವೇ ಸರಿಸಾಟಿಯಾಗಿರುವುದನ್ನು ನೋಡುತ್ತೇವೆ.

ಅಂದಾನಿಯವರು ಇದರಿಂದ ಹೊರತಾಗಿಲ್ಲ, ಅವರು ಚಿತ್ರಕಲಾ ಅಭ್ಯಾಸ ಮಾಡುವ ಸಂದರ್ಭದಲ್ಲಿ ಅವರ ಗುರುಗಳ ಅಕಾಡೆಮಿಕ್ ವಾತಾವರಣದ ಪ್ರಭಾವ ಒಂದೆಡೆಯಾದರೆ, ಎ.ಎ.ಆಲಮೇಲಕರ್ ಅವರ ಚಿತ್ರಗಳು ಹಾಗೂ ಆಗಿನ ಕಾಲದ ಪಾಶ್ಚಾತ್ಯ ಕಲಾವಿದರಾದ ವ್ಯಾನ್ ಗಾಗ್, ಪಿಕಾಸೊ ಕಲಾವಿದರ ಪ್ರಭಾವ ಇವರ ಪ್ರಾರಂಭದ ದಿಶೆಯಲ್ಲಿ ಅನೇಕ ಕಲಾಕೃತಿಗಳಲ್ಲಿ ನೋಡಬಹುದಾಗಿದೆ.

ಅಂದಾನಿಯವರು ತಮ್ಮ ಬಾಲ್ಯದ ಕಂಡುಂಡ ಅನುಭವಗಳು, ಗ್ರಾಮೀಣ ಬದುಕು, ಸಂಸ್ಕೃತಿ, ಹಬ್ಬ-ಹರಿದಿನಗಳು, ಸಂತೆ, ರೈತಾಪಿ ಜೀವನ, ಆಚಾರ-ವಿಚಾರ, ಗ್ರಾಮೀಣ ಜನತೆಯ ಸಹಜ ಸ್ವಭಾವ ನಡುವಳಿಕೆಗಳೊಂದಿಗೆ ಸಾಂಸ್ಕೃತಿಕ ಬದುಕಿನ ಗತ ವೈಭವದ ನೋಟಗಳಿಂದ ಪ್ರಭಾವಿತರಾಗಿದ್ದಾರೆ.

ಗ್ರಾಮೀಣ ಬದುಕಿನಿಂದ ಪ್ರಭಾವಗೊಂಡಿರುವ ವ್ಹಿ.ಜಿ. ಅಂದಾನಿಯವರ ರೇಖಾಕೃತಿಗಳಲ್ಲಿ ಗ್ರಾಮೀಣ ಸಂಸ್ಕೃತಿಯದೆ ಸಿಂಹಪಾಲು. ಇದರೊಂದಿಗೆ ಜನರ ಭಾವ ವ್ಯಕ್ತಿ ಚಿತ್ರಗಳು, ಜಾತ್ರೆ, ಗಣಪತಿ, ಉತ್ಸವ, ಚರ್ಚೆ, ಸಖಿಯರ ಸಂಭಾಷಣೆ, ಕ್ಷೌರಿ ಅಂಗಡಿ, ಸ್ವಾತಂತ್ರ್ಯ ಹೋರಾಡದ ಕಲ್ಪನೆ, ಅಜ್ಜಿ ಮೊಮ್ಮಗಳ ಪ್ರೀತಿ, ಗ್ರಾಮ ಪಂಚಾಯಿತಿಯ ಸನ್ನಿವೇಶ, ಗ್ರಾಮೀಣ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ. ಪುರಾತನ ಶೈಲಿಯ ಮನೆಗಳು, ಹಿರಿಯರ ನೆನಪುಗಳನ್ನು ಮೆಲುಕು ಸನ್ನಿವೇಶ, ಶಾಸನದ ದೃಶ್ಯ, ಮೂಢ ನಂಬಿಕೆಗಳನ್ನು ಮೈಗೂಢಿಸಿಕೊಂಡಿರುವ ಗ್ರಾಮ ದೇವತೆಯ ಜಾತ್ರೆ, ಮನುಷ್ಯ ಮನುಷ್ಯರ ನಡುವಿನ ಸೂಕ್ಷ್ಮ ಸಂಬಂಧಗಳು, ಮಾನವನ ಒಳಮನಸ್ಸಿನ ಚಿತ್ರಣ, ಸಾವಿನ ಭೀಕರ ದೃಶ್ಯ, ರಾಷ್ಟ್ರಪಿತ ಮಹಾತ್ಮ ಗಾಂಧೀಜಿ ಕುರಿತಂತೆ ರಚಿಸಿದ ರೇಖಾ ಚಿತ್ರಗಳು ಅಂದಾನಿಯವರ ರೇಖಾಪ್ರೌಢಿಮೆಗೆ ಸಾಕ್ಷಿ ಎಂಬಂತಿವೆ.

ಅಂದಾನಿಯವರ ನಿಸರ್ಗ ಚಿತ್ರಗಳಲ್ಲಿ ಗುಲಬರ್ಗಾ ಪರಿಸರ, ಕಿರಣಗಿ ಪರಿಸರ, ಹಂಪಿಯ ಪರಿಸರ ಹೀಗೆ ನಮ್ಮ ರಾಜ್ಯದ ಸುತ್ತಮುತ್ತಲಿನ ಪರಿಸರ ಅಂದಾನಿಯವರ ಮೇಲೆ ಗಾಢವಾದ

ಪ್ರಭಾವ ಬೀರಿದ್ದರಿಂದ ಪ್ರಕೃತಿ ಚಿತ್ರಗಳಲ್ಲಿ ಗಿಡಮರಗಳ ಅನೇಕ ಕಲಾಕೃತಿಗಳನ್ನು ನೋಡಬಹುದಾಗಿದೆ. ಅಷ್ಟೇ ಅಲ್ಲದೇ ಸಂಯೋಜನೆ ಚಿತ್ರಗಳಲ್ಲಿ ಹಳ್ಳಿಯ ಜನರ ಜೀವನ, ಪ್ರಾಣಿ-ಪಕ್ಷಿ, ಆಧುನಿಕ ತಂತ್ರಜ್ಞಾನ ಮತ್ತು ಧಾರ್ಮಿಕತೆಗೆ ಸಂಬಂಧಿಸಿದ ಮತ್ತು ಹಳೆಯ ವಸ್ತುಗಳಾಗಿರಬಹುದು. ಕೋಟೆ-ಕೊತ್ತಲು ಹೀಗೆ ಅನೇಕ ಪ್ರಭಾವಗಳಿಗೆ ಅಂದಾನಿಯವರು ಒಳಗಾಗಿ ಕೃತಿರಚನೆ ಮಾಡಿದ್ದಾರೆ.

೧೯೬೯ರಲ್ಲಿ ಡಿಪ್ಲೋಮಾದ ದಿನಗಳಲ್ಲಿ ಕಲಾಸೃಷ್ಟಿ ದಿ. ಆಲಮೇಲಕರ ರೇಖೆ-ಬಣ್ಣ-ವಸ್ತುಗಳಿಂದ ಸ್ಫೂರ್ತಿಗೊಂಡು ಅಲಂಕೃತಗೊಂಡವು. ೧೯೭೦ರಲ್ಲಿ ಭಿತ್ತಿಚಿತ್ರ ರಚಿಸುವ ತರಬೇತಿಯನ್ನು ರಾಜಸ್ಥಾನದ ಬನಸ್ಥಳಿಯಲ್ಲಿ ಸಮಕಾಲೀನ ಚಿತ್ರ ತಂತ್ರಗಳು ಇವರ ಕೃತಿಗಳಲ್ಲಿ ಹೊಸ ಚೇತನದಿಂದ ಕಾಣಿಸಿಕೊಂಡವು. ಅಕಾಡೆಮಿಕ್ ಆದ ಚಿತ್ರ ರೂಪ, ಶೈಲಿಗಳಿಂದ ಭಿನ್ನವಾಗಿ ಅಭಿವ್ಯಕ್ತಿಗೆ ಅನುವಾಗುವಂಥ ಹಾದಿಗಳನ್ನರಸಿ ಹೊರಟರು.

ಗುಲಬರ್ಗಾ ಶರಣ ಬಸವೇಶ್ವರ ಪ್ರಾಥಮಿಕ ಮತ್ತು ಪ್ರೌಢಶಾಲೆಯಲ್ಲಿ ಪಾಶ್ಚಿಮಾತ್ಯ ಪದ್ಧತಿಯ ಅಕಾಡೆಮಿಕ್ ಶೈಲಿಯ ತಂತ್ರವನ್ನೇ ಹೇಳಿಕೊಡುತ್ತಿದ್ದರು. ಡಿಪ್ಲೋಮಾದಲ್ಲೂ ಪಾಶ್ಚಾತ್ಯರ ಶೈಲಿಯನ್ನೇ ಹೇಳಿಕೊಡುತ್ತಿದ್ದರು. ಹಾಗಾಗಿ ಪ್ರೌಢಶಾಲೆ ಮತ್ತು ಡಿಪ್ಲೋಮಾ ಕಲಾಶಾಲೆಯಲ್ಲಿ ಶಿಸ್ತುಬದ್ಧವಾದಂತಹ ಕಲಾಶಿಕ್ಷಣದ ಅಭ್ಯಾಸ ಕ್ರಮದ ನೆರಳನ್ನು ಆಗಿನ ಕಾಲದ ಎಲ್ಲಾ ಕಲಾವಿದರ ಕಲಾಕೃತಿಗಳಲ್ಲೂ ಕಂಡುಬರುತ್ತದೆ. ಹೀಗಾಗಿ ಭಾರತೀಯ ಹಾಗೂ ಪಾಶ್ಚಿಮಾತ್ಯ ಮಿಶ್ರ ಕಲಾ ಸಂಪ್ರದಾಯದ ಚಿತ್ರ ಕಲಾವಿದರು ಬೆಳೆದುಬಂದಿದ್ದರು. ಅದರಲ್ಲಿ ಕಲಾವಿದ ವ್ಹಿ.ಜಿ.ಅಂದಾನಿಯವರೂ ಒಬ್ಬರು.

**೫.೩ ಪ್ರೇರಣೆ**

ಕಲಾಕಾರನಿಗೆ ಅನೇಕ ಪ್ರೇರಣೆ ದೊರಕುವುದುಂಟು. ಕೆಲವೊಮ್ಮೆ ಪ್ರತ್ಯಕ್ಷವಾಗಿ ಕೆಲವೊಮ್ಮೆ ಪರೋಕ್ಷವಾಗಿ ಕಲಾಕಾರನ ಮನಸ್ಸು, ಬುದ್ಧಿಶಕ್ತಿ ಸರ್ವದಾ ಜಾಗೃತವಾಗಿದ್ದು ಸಂವೇದನಾಶೀಲವಾಗಿರಬೇಕು. ಸಮಾಜದ ಸಂಘರ್ಷ, ನಿರಾಶೆ ಮತ್ತು ಉಲ್ಲಾಸ, ದ್ವಂದ್ವ ಇವೆಲ್ಲವೂ ಕಲಾವಿದನ ಸಂವೇದನಾಶೀಲ ಮನಸ್ಸನ್ನು ಉತ್ತೇಜಿಸಲು ಸಮರ್ಥವಾಗುತ್ತವೆ.

ಅಂದಾನಿಯವರು ಬಾಲ್ಯದಿಂದಲೇ ಚಿತ್ರಕಲೆಯ ಅಭಿರುಚಿಯನ್ನು ಹೊಂದಿದವರು. ಇದರ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಮಾಡುತ್ತಾ ಚಿತ್ರಕಲೆಯನ್ನು ಕೇಂದ್ರೀಕರಿಸಿ ನಿಸರ್ಗದೊಂದಿಗೆ ಬಣ್ಣದ ಕುಂಚದಿಂದ ಬೆರೆತವರು.

ಅಂದಾನಿಯವರ ಮನೆತನ ಒಳ್ಳೆಯ ಸುಸಂಸ್ಕೃತ ಮನೆತನದಿಂದ ಬಂದಿದ್ದು. ಅಂದಾನಿಯವರ ತಂದೆ ಗುರಪ್ಪನವರು ಒಬ್ಬ ಕೃಷಿಕರಾಗಿದ್ದರೂ, ಕೂಡ ಕಲಾತ್ಮಕವಾಗಿ ಮಣ್ಣೆತ್ತುಗಳು ಮತ್ತು ಗಣೇಶನ ಮೂರ್ತಿಗಳನ್ನು ಮಾಡುತ್ತಿದ್ದರು. ಅಂದಾನಿಯವರು ಬಾಲ್ಯದಲ್ಲಿ ಇದನ್ನು ಕಂಡು ಪ್ರೇರಿತರಾಗಿ ಅವರು ಮಣ್ಣಿನ ಶಿಲ್ಪ ಕಲಾಕೃತಿಗಳನ್ನು ಮಾಡುತ್ತಿದ್ದರು.

ಅಂದಾನಿಯವರು ಗುಲಬರ್ಗಾ ಶರಣಬಸವೇಶ್ವರ ಪ್ರಾಥಮಿಕ ಮತ್ತು ಪ್ರೌಢಶಾಲೆಯಲ್ಲಿದ್ದಾಗ ಪ್ರಥಮವಾಗಿ ಚಿತ್ರಕಲೆಯ ಬಗ್ಗೆ ಪ್ರೇರಣೆ ನೀಡಿ ಸಾಕಷ್ಟು ಪ್ರೋತ್ಸಾಹವನ್ನು ನೀಡಿದರು. ಡ್ರಾಯಿಂಗ ಶಿಕ್ಷಕರಾಗಿದ್ದ ಮೇಸ್ತ್ರು ಬಂಕೂರಕರ್ ಅವರು ಅಂದಾನಿಯವರಲ್ಲಿ ಕಲಾ ಪ್ರತಿಭೆಯನ್ನು ಗುರುತಿಸಿ ಪ್ರೇರಣೆ ನೀಡಿದ ಪ್ರಥಮ ಗುರುಗಳು ಎನ್ನಬಹುದು.

ಅಂದಾನಿಯವರು ಬಾಲ್ಯದಲ್ಲಿ ಪ್ರಕೃತಿ ಸೌಂದರ್ಯ, ಮನೆತನದ ಸಾಂಸ್ಕೃತಿಕ ಪರಿಸರ ಹಾಗೂ ಕಲಾಗುರುಗಳಾದ ಬಂಕೂರಕರ್ ಅವರ ಪ್ರೇರಣೆಯಿಂದ ಕಲಾಕೃತಿ ನಿರ್ಮಿಸಿದರು. ನಂತರದಲ್ಲಿ ಅಂದಾನಿಯವರ ಉನ್ನತ ವಿದ್ಯಾಭ್ಯಾಸವನ್ನು ಗುಲಬರ್ಗಾದಲ್ಲಿ ಮಾಡಿದರು. ಅಲ್ಲಿನ ಸಾಂಸ್ಕೃತಿಕ ವಾತವರಣದಿಂದ ಮತ್ತಷ್ಟು ಪ್ರೇರಿತಗೊಂಡು ನೂರಾರು ಕಲಾಕೃತಿಗಳನ್ನು ಅಧ್ಯಯನ ಅವಧಿಯಲ್ಲಿ ರಚಿಸಿದ್ದಾರೆ.

ಇವರಿಗೆ ಹೆಚ್ಚಿನ ಪ್ರೇರಣೆಯನ್ನು ನೀಡಿದವರು ಗುಲಬರ್ಗಾ ಕಲಾಶಾಲೆಯ ಗುರುಗಳಾದ ಶ್ರೀ ಜೆ. ಎಸ್. ಖಂಡೇರಾವ್ ಶಿವ ಮುನ್ನೊಳ್ಳಿಯವರು. ಅಲ್ಲದೇ ಅವರ ಪ್ರತಿಯೊಂದು ಕಲಾಪ್ರದರ್ಶನದಲ್ಲಿ ಕಲಾಕೃತಿ ರಚನೆಯಲ್ಲಿ ಕಲಾ ಚಟುವಟಿಕೆಯಲ್ಲಿ ಸಾಕಷ್ಟು ಸಲಹೆ ಸೂಚನೆಗಳನ್ನು ನೀಡಿದರು. ಅಲ್ಲದೆ ಅಂದಾನಿ ಅವರು ೧೯೮೭ ರಲ್ಲಿ ರಷ್ಯಾಕ್ಕೆ ಪ್ರವಾಸ ಕೈಗೊಂಡಾಗ ಉಜ್ಬಕಿಸ್ಥಾನದಲ್ಲಿ ಇರುವ ೩೦ ಅಡಿಯ ಲೆನಿನ್ ಶಿಲ್ಪ, ತಾಸ್ಕೆಂಟ ಲೆನಿನ್ನ ಗಾರ್ಡನ್, ಹೆರಿಟೇಜ್ ಆರ್ಟ್ ಗ್ಯಾಲರಿ, ಸಮಕಾಲೀನ ಚಿತ್ರ ಸಂಗ್ರಹಾಲಯ, ಆರ್ಟ್ ಮ್ಯೂಜಿಯಂನಲ್ಲಿ ಅನೇಕ ಮಹಾನ್ ಕಲಾವಿದರ ಕಲಾಕೃತಿಗಳು, ಕಿವ್ ಪಟ್ಟಣದಲ್ಲಿರುವ ಶಿಲ್ಪ ಸ್ಮಾರಕಗಳು, ರಷ್ಯಾದ ಎಲ್ಲಾ ಪುರತತ್ವ ಕಟ್ಟಡಗಳನ್ನು ವೀಕ್ಷಿಸಿ ಅಲ್ಲಿಯ ಕಲಾವಿದರ ಕಲಾಕೃತಿಗಳಿಂದ ಪ್ರೇರಿತರಾದರು.

ಪ್ರೇರಣೆಯು ಸಹಾಯ ಎನ್ನುವ ಪದಕ್ಕೆ ಸಮೀಪದಲ್ಲಿ ಸಹಾಯ-ಪ್ರೇರಣೆ ಎರಡು ಪದಗಳು ಬೇರೆ ಬೇರೆಯಾದರೂ ಅದರ ಅರ್ಥ ಕೆಲವು ಸಂದರ್ಭಗಳಲ್ಲಿ ಒಂದೇ ಆಗಿರುತ್ತದೆ. ಸಹಾಯವು ಬಾಹ್ಯ ಪ್ರಚೋದನೆಗೆ ಸಂಬಂಧ ಪಟ್ಟರೆ ಪ್ರೇರಣೆಯ ಆಂತರಿಕ ಪ್ರಚೋದನೆಗೆ ಸಂಬಂದ ಪಡುತ್ತದೆ.[೨]

ಹೀಗೆ ಅಂದಾನಿ ಅವರಿಗೆ ತಂದೆ-ತಾಯಿಗಳು, ಕಲಾಗುರುಗಳಿಂದ ತಮಗೆ ಸಾಕಷ್ಟು ಪ್ರೇರಣೆ ನೀಡಿದ ಕಲಾ ಸ್ನೇಹಿತರಿಂದ ಹಾಗು ಕಲಾ ಅಧ್ಯಯನ ಪ್ರವಾಸ ಪರಿಣಾಮವಾಗಿ ಗುಲಬರ್ಗಾದಲ್ಲಿ ಸ್ನಾತಕೋತ್ತರ ಪದವಿ ಕೇಂದ್ರ ಪ್ರಾರಂಭಿಸಿದರು. ಈ ರೀತಿಯಾಗಿ ದೇಶದಲ್ಲಿಯೇ ಇವರು ದೊಡ್ಡ ಕಲಾವಿದರ ಸಾಲಿನಲ್ಲಿ ಸೇರುತ್ತಾರೆ.

### ೫.೪. ತಂತ್ರಗಾರಿಕೆ

ಕಲೆ ಜನಗಳ ಮನಸ್ಸಿನ ಮೇಲೆ ಪ್ರಭಾವ ಬೀರುವ ಒಂದು ಮುಖ್ಯ ಸಾಧನವಾಗಿದೆ. ಅದಕ್ಕಾಗಿ ಚಿತ್ರಕಲೆ ಮನೋವಿಜ್ಞಾನದ ಸಿದ್ಧಾಂತಗಳ ಮೇಲೆ ಆಧಾರವಾಗಿರುವುದನ್ನು ಕಂಡುಕೊಳ್ಳಲಾಗಿದೆ. ಕಲೆಯಲ್ಲಿ ಕೇವಲ ತಾಂತ್ರಿಕ ನೈಪುಣ್ಯತೆ ಹೊಂದಿದ್ದರೆ ಸಾಲದು. ತಾಂತ್ರಿಕ ನೈಪುಣ್ಯತೆಯೊಂದಿಗೆ

ಮನೋವಿಜ್ಞಾನದ ತತ್ವಗಳನ್ನು ಅಳವಡಿಸಿಕೊಂಡರೇ ಚಿತ್ರಕಲಾಕೃತಿಯ ನೈಪುಣ್ಯತೆ ಹೆಚ್ಚುತ್ತದೆ. ಯಾವುದೇ ಒಂದು ಕಲಾಕೃತಿಯ ಹಿಂದೆ ಕಲಾವಿದನ ಮನಸ್ಥಿತಿಯು ಮುಖ್ಯ ಕಾರಣವಾಗಿರುತ್ತದೆ. ಹೀಗಾಗಿ ಚಿತ್ರಕಲೆ ಮನಃಶಾಸ್ತ್ರಕ್ಕೆ ಬಿಡಲಾರದ ನಂಟುತನವಿದ್ದು ಇವು ಒಂದಕ್ಕೊಂದು ಪೂರಕ ಮತ್ತು ಪ್ರೇರಕವಾದ ಸಂಬಂಧವನ್ನು ಹೊಂದಿದೆ ಎಂದು ಹೇಳಬಹುದು.

ಭಾರತದ ಆಧುನಿಕ ಕಲಾವಿದ ವಿ.ಜಿ.ಅಂದಾನಿ ಅವರ ಕಲೆಯಲ್ಲಿ ಪ್ರಾಮಾಣಿಕತೆ ಸಮತೂಕ ಅಷ್ಟೇ ಅಲ್ಲ ಅರ್ಥ ಮತ್ತು ಅರಿವು ಎರಡೂ ಇವೆ. ಅವರು ಕಲೆಯು ಯಾವುದೇ ಕಟ್ಟುಪಾಡುಗಳಿಗೆ ಒಳಪಡಬಾರದೆಂದು ಅವರ ನಿಲುವು, ಹೊಸತನ ಸ್ವೀಕರಿಸಲು ಅವರು ಹಿಂಜರಿಯುವುದಿಲ್ಲ. ಪ್ರಕಟ ಪಡಿಸಲು ಹೆಚ್ಚು ಸಮರ್ಥ ಎಂಬ ಕಾರಣಕ್ಕಾಗಿ ಅವರು ಆಧುನಿಕ ಕಲಾ ತಂತ್ರಗಳನ್ನು ಅಳವಡಿಸಿಕೊಂಡರು. ವಿಚಾರಗಳನ್ನು ಅತಿ ರಂಜಿತಗೊಳಿಸುವುದಾಗಲಿ ಆಕರಗಳನ್ನು ವಿರೂಪಗೊಳಿಸುವುದಾಗಲಿ ಅರ್ಥಹೀನವೆಂದು ಹೇಳುತ್ತಾರೆ. ಅಂದಾನಿ ಅವರು ನೇರವಾದ ಸರಳವಾದ ತಂತ್ರಗಳೇ ಪರಿಣಾಮಕಾರಿಯಾಗಿರುತ್ತದೆ ಎಂದು ಹೇಳುತ್ತಾರೆ.೩

ಅಂದಾನಿಯವರು ಕಲಾಕೃತಿಗಳನ್ನು ರಚಿಸಬೇಕಾದರೆ ತಮ್ಮದೆಯಾದ ವಿಚಾರ ತಂತ್ರ, ಶೈಲಿ ಬಳಿಸಿಕೊಂಡು ಚಿತ್ರರಚನೆ ಮಾಡುತ್ತಾರೆ. ಪ್ರಾರಂಭದಲ್ಲಿ ರೇಖಾಚಿತ್ರ ರಚಿಸುವ ಸಂದರ್ಭದಲ್ಲಿ ಅನೇಕ ಕಲಾವಿದರು ಮತ್ತು ಧರ್ಮಯುಗ ಪತ್ರಿಕೆಯಲ್ಲಿ ಬರುತ್ತಿದ್ದ ಕಲಾವಿದರ ರೇಖಾಚಿತ್ರಗಳಿಂದ ಪ್ರಭಾವಿತರಾಗಿ ಚಿತ್ರಗಳನ್ನು ರಚಿಸಿದ್ದುಂಟು.

**೫.೫ ರೇಖಾಚಿತ್ರ ರಚಿಸುವ ವಿಧಾನ**

ಅಂದಾನಿಯವರು ರೇಖಾಚಿತ್ರ ರಚಿಸುವ ಮುನ್ನ ಪೇಪರನ್ನು ನೀರಿನಲ್ಲಿ ಒದ್ದೆಯಾಗಿಸಿ ಸ್ವಲ್ಪ ಸಮಯದ ನಂತರ ಅದರ ಮೇಲೆ ಕಪ್ಪು ವರ್ಣ (ಇಂಡಿಯನ್ ಇಂಕ್ ಅಥವಾ ಮಾರ್ಕರ)ಗಳಿಂದ ನೇರವಾಗಿ ತಮ್ಮ ಮನಸ್ಸಿನಲ್ಲಿ ಬಂದಿರುವ ವಿಚಾರಗಳನ್ನು ಅದರಲ್ಲಿ ಅಭಿವ್ಯಕ್ತಿಸುತ್ತಾರೆ. ಸಮಯ ತೆಗೆದುಕೊಳ್ಳದೆ ಸರಳವಾಗಿ ಮನಸಿನಲ್ಲಿ ಹೊಳೆದ ವಿಚಾರಗಳನ್ನು ಸರಳವಾಗಿ ರೇಖಿಸುತ್ತಾರೆ. ಅಂದಾನಿಯವರು ಯಾವಾಗಲೂ ಮಾನಸಿಕವಾಗಿ ನಿರಾಳತೆಯಿಂದ ಚಿತ್ರ ರಚನೆ ಮಾಡುತ್ತಾರೆ. ಮನಸ್ಸು ನಿರಾತಂಕವಾಗಿ ಇರುವಾಗ ರಚಿಸಿದ ಕಲಾಕೃತಿಗಳಲ್ಲಿ ಹೆಚ್ಚು ಸತ್ವ ಇರುತ್ತದೆ. ಅವರು ಯಾವುದೇ ನಿರ್ಬಂಧನೆಗೆ ಒಳಪಡದೆ ತಮಗೆ ಅನೀಸಿದ ಅಭಿಪ್ರಾಯಗಳನ್ನು ಕ್ಯಾನವಾಸ ಮತ್ತು ಪೇಪರಿನ ಮೇಲೆ ರೇಖಾಚಿತ್ರಗಳ ಮೂಲಕ ಹೆಚ್ಚು ಅಭಿವ್ಯಕ್ತಿಸಿದ್ದಾರೆ. ಮಾಡಿದ್ದಾರೆ. ನಂತರದಲ್ಲಿ ಎಲ್ಲಿ ನೆರಳು ಬೇಕಾಗುತ್ತದೆ ಅಲ್ಲಿ ಪೇಪರ ಇನ್ನೂ ಒದ್ದೆ ಇರುವಾಗಲೇ ವರ್ಣವನ್ನು ಬಳಸುತ್ತಾರೆ. ಹೀಗೆ ಅಂದಾನಿಯವರ ರೇಖಾಚಿತ್ರ ರಚನೆಯ ತಂತ್ರ ವಿಶೇಷವಾಗಿದೆ.

**೫.೬ ಕಲಾಕೃತಿ ಮಾಡುವ ತಂತ್ರ**

ಅಂದಾನಿಯವರು ಕಲಾಕೃತಿ ರಚಿಸುವ ಸಂದರ್ಭದಲ್ಲಿ ಮೊದಲು ಒಂದು ವರ್ಣವನ್ನು

ಜಲವರ್ಣದಂತೆ ತೆಳುವಾಗಿ ಕ್ಯಾನವಾಸ ಅಥವಾ ಪೇಪರಿನ ಮೇಲೆ ತೆಳುವಾಗಿ ಲೇಪಿಸಿಕೊಳ್ಳುತ್ತಾರೆ, ಅಕ್ರಾಲಿಕ ಅಥವಾ ತೈಲವರ್ಣ ವಾಗಲಿ ಇದೆ ವಿಧಾನ ಬಳಸುತ್ತಾರೆ. ನಂತರದಲ್ಲಿ ಎಲ್ಲಿ ಬೇಕೋ ಅಲ್ಲಿ ತಮಗೆ ಬೇಕಾದ ವರ್ಣವನ್ನು ಬಳಸುತ್ತಾರೆ. ಆ ಕ್ಯಾನವಾಸಿನಲ್ಲಿ ಬಂದಿರುವ ಮೈವಳಿಕೆಗಳಲ್ಲಿ, ಅದರಲ್ಲಿ ಯಾವುದು ಬೇಕು ಅದನ್ನು ಹಾಗೆ ಬಿಟ್ಟು ಅದರಲ್ಲಿ ಹಳ್ಳಿಯ ಜನಜಿವನ, ಪ್ರಾಣಿ–ಪಕ್ಷಿ. ತಂತ್ರಜ್ಞಾನ ಮತ್ತು ಸಮಕಾಲೀನ ಸಂದರ್ಭವನ್ನು ಇಟ್ಟುಕೊಂಡು ಕಲಾಕೃತಿ ರಚಿಸುತ್ತಾರೆ.

ಅಂದಾನಿಯವರು ಕಲಾಕೃತಿಯಲ್ಲಿ ಮೈವಳಿಕೆಗಳನ್ನು ಮಾಡಬೇಕಾದರೆ ಸ್ಪಂಜು. ಡಸ್ಟರಗಳಿಂದ ಕ್ಯಾನವಾಸಿನಲ್ಲಿ ಮೈವಳಿಕೆಗಳನ್ನು ನಿರ್ಮಿಸಿಕೋಳ್ಳುತ್ತಾರೆ. ಕಲಾಕೃತಿಯಲ್ಲಿ ನೆರಳು ಬೆಳಕು ಕೊಡಬೇಕಾದರೆ ಒಮ್ಮೊಮ್ಮೆ ಒನಗಿದ ಕುಂಚದಿಂದ (ಡ್ರಾಯ ಬ್ರಶ್) ದಿಂದಲೂ ಮತ್ತು ಬಟ್ಟೆಯಿಂದಲೂ ಮಾಡುತ್ತಾರೆ.

**ಟಿಪ್ಪಣಿಗಳು**

೪೦. ಜಿ.ಎಸ್ .ಭೂಸಗೊಂಡ ಚಿತ್ರಕಲಾವಿದ ಚಂದ್ರವರ್ಮ.ಬಿ.ಆರ್.ಕೋಟ್ಯಾಳ್ಕರ್ ಒಂದು ಅಧ್ಯಯನ. ಪುಟ ಸಂಖ್ಯೆ–೨೭೧



ಅಧ್ಯಾಯ –೬

## ಕಲಾ ಚಟುವಟಿಕೆ, ಸಂದ ಪ್ರಶಸ್ತಿ ಗೌರವಗಳು ಮತ್ತು ಸಾಹಿತ್ಯ

೬.೧. ಕಲಾ ಚಟುವಟಿಕೆಗಳು

೬.೨. ಪ್ರಶಸ್ತಿ ಪುರಸ್ಕಾರಗಳು

೬.೩. ಅಂದಾನಿಯವರು ಸಂಗ್ರಹಿಸಿದ ಕಲಾಕೃತಿ ಮತ್ತು ಕಲಾತ್ಮಕ ವಸ್ತುಗಳು

೬.೪. ಅಂದಾನಿಯವರ ಕುರಿತು ಬಂದಂತಹ ಸಾಹಿತ್ಯ

ಮತ್ತು ಅವರು ಬರೆದ ಸಾಹಿತ್ಯ

## ಅಧ್ಯಾಯ-ಆರು

# ಕಲಾ ಚಟುವಟಿಕೆ, ಸಂದ ಪ್ರಶಸ್ತಿ ಗೌರವಗಳು ಮತ್ತು ಸಾಹಿತ್ಯ

ಅಂದಾನಿಯವರು ತಮ್ಮ ಕಲಾಬದುಕಿನುದ್ದಕ್ಕೂ ನಿರಂತರವಾಗಿ ಕಲಾಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವ ಮೂಲಕ ತಮ್ಮಲ್ಲಿನ ಸೃಜನಶೀಲತೆ, ಕ್ರಿಯಾಶೀಲತೆಗಳನ್ನು ಜೀವಂತವಾಗಿರಿಸಿ ಕೊಂಡವರು. ಅಂದಾನಿಯವರು ಬಹುಮುಖ ಪ್ರತಿಭೆಯ ಕಲಾಸಾಧಕರಾಗಿರುವುದರಿಂದ ಕೇವಲ ಕಲಾ ಚಟುವಟಿಕೆಗಳಲ್ಲದೇ ಅದಕ್ಕೆ ಪೂರಕವಾದ ಸಾಹಿತ್ಯ, ಸಂಗೀತ, ನಾಟ್ಯ, ನಾಟಕ ಮುಂತಾದ ಚಟುವಟಿಕೆಗಳಿಗೂ ಪ್ರೋತ್ಸಾಹ ಕೊಡುತ್ತಾ ಬಂದಿದ್ದಾರೆ. ಅಂದಾನಿಯವರ ಕಲಾಸಂಸ್ಥೆಯೊಳಗೆ ಪ್ರವೇಶಿಸಿದರೆ ಅಲ್ಲಿ ಎಲ್ಲ ಕಲೆಗಳ ಸಂಗಮ ಕಂಡುಬರುತ್ತದೆ. ಚಿತ್ರಕಲೆಯನ್ನು ಕಲಿಸುವ ಕಲಾಶಾಲೆಯಾಗಿ ಅದು ಹುಟ್ಟಿಕೊಂಡರು. ಅಲ್ಲಿ ಶಿಲ್ಪ, ವಾಸ್ತು, ಸಂಗೀತ, ನಾಟ್ಯ, ಅಭಿನಯ ಮುಂತಾದ ಕಲಾಪ್ರಕಾರಗಳ ಸಮನ್ವಯವಿದೆ.

ಕಲಾಸಂಸ್ಥೆಯ ಕಟ್ಟಡವೇ ಒಂದು ಸುಂದರ ವಾಸ್ತುಶಿಲ್ಪಕೃತಿಯಾಗಿ ಕಂಗೊಳಿಸುತ್ತದೆ. ಕಲಾಶಾಲೆಯ ಆವರಣದಲ್ಲಿ ಶಿಲ್ಪರಚನೆ, ಗ್ರಾಫಿಕ್ಸ್, ಮುದ್ರಣ, ಅನ್ವಯಕಲೆ, ಕಲಾ ಇತಿಹಾಸ ತರಬೇತಿಗಳು ನಿರಂತರ ನಡೆದಿರುತ್ತವೆ. ಇದಲ್ಲದೇ ಸಂಗೀತ, ಸಾಹಿತ್ಯ, ನಾಟಕ, ನೃತ್ಯ ಕಲಾಪ್ರಕಾರಕ್ಕೆ ಸಂಬಂಧಿಸಿದ ಚಟುವಟಿಕೆಗಳು ಇಲ್ಲಿ ನಿರಂತರ ನಡೆಯುತ್ತವೆ. ಇವುಗಳಿಂದಾಗಿ ಇಲ್ಲಿನ ಕಲಾ ವಾತಾವರಣ ಒಂದು ವಿಶಿಷ್ಟ ಅನುಭವವನ್ನು ಒದಗಿಸುತ್ತದೆ ಎಂದರೆ ತಪ್ಪಾಗಲಾರದು. ಇಂತಹ ಎಲ್ಲ ಶಿಸ್ತುಗಳಲ್ಲಿ ಆಸಕ್ತಿ ಹೊಂದಿದ ಅಂದಾನಿಯವರು ತಮ್ಮ ವಿದ್ಯಾರ್ಥಿಗಳು ಮತ್ತು ಸಮಾಜಕ್ಕೂ ಇವುಗಳ ಕುರಿತಾಗಿ ಒಲವು ಮೂಡಿಸುವ ನಿಟ್ಟಿನಲ್ಲಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ.

ಇಂತಹ ಚಟುವಟಿಕೆಗಳಲ್ಲದೇ ಕಲಾಸಂಸ್ಥೆಯಲ್ಲಿ ನಿರಂತರವಾಗಿ ಕಲಾಚಟುವಟಿಕೆಗಳು ನಡೆದಿರುತ್ತವೆ. ವಿದ್ಯಾರ್ಥಿಗಳ, ಕಲಾವಿದರ, ಅಧ್ಯಾಪಕರ ಪ್ರದರ್ಶನಗಳು, ಪ್ರಾತ್ಯಕ್ಷಿಕೆಗಳು, ಉಪನ್ಯಾಸಗಳು, ರಾಜ್ಯ, ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಟ್ಟದ ಕಲಾ ಶಿಬಿರ, ಕಾರ್ಯಾಗಾರ, ಪ್ರದರ್ಶನಗಳು, ಇಲ್ಲಿ ಸತತವಾಗಿ ಜರುಗುತ್ತಲಿರುತ್ತವೆ. ಈ ಹಿನ್ನೆಲೆಯಲ್ಲಿ ಕಲಾಸಂಸ್ಥೆಯಲ್ಲಿ ನಡೆದ ಚಟುವಟಿಕೆಗಳು ಮತ್ತು ಅಂದಾನಿಯವರು ಭಾಗವಹಿಸಿದ ಕಲಾಚಟುವಟಿಕೆಗಳನ್ನು ಸಮೀಕರಿಸಿ ಸಂಕ್ಷಿಪ್ತವಾಗಿ ಕೆಳಗಿನಂತೆ ವಿವರಿಸಲಾಗಿದೆ.

ಅಂದಾನಿಯವರ ಕಲಾಬದುಕಿನ ಒಟ್ಟಾರೆ ಚಟುವಟಿಕೆಗಳನ್ನು ಅವರ ವಿದ್ಯಾಭ್ಯಾಸ, ಕಲಾಪ್ರದರ್ಶನ, ಕಲಾಶಿಬಿರ, ಉಪನ್ಯಾಸ, ಪ್ರಶಸ್ತಿ, ಗೌರವಗಳು, ಕಲಾಕೃತಿ ಸಂಗ್ರಹಗಳು ಎಂಬುದಾಗಿ ವಿಂಗಡಿಸಿಕೊಂಡು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

**ವಿದ್ಯಾಭ್ಯಾಸ**

೧೯೬೯ : ಡಿಪ್ಲೋಮಾ ಇನ್ ಪೇಂಟಿಗ್, ಐಡಿಯಲ್ ಫೈನ್ ಆರ್ಟ್ ಕಲಾಶಾಲೆ, ಗುಲಬರ್ಗಾ.

೧೯೭೦ : ಭಿತ್ತಿಚಿತ್ರ ರಚನಾ ತರಬೇತಿ-ಬನಸ್ಥಳಿ ವಿದ್ಯಾಪೀಠ, ರಾಜಸ್ಥಾನ.

೧೯೭೨ : ಬಿ.ಎ. ಪದವಿ, ಶರಣಬಸವೇಶ್ವರ ಆರ್ಟ್ಸ್ ಕಾಲೇಜ್, ಗುಲಬರ್ಗಾ.

**೬.೧. ಕಲಾ ಪ್ರದರ್ಶನಗಳು**

೧೯೬೯, ೭೨, ೭೩, ೮೯ : ಶಹಾಬಾದ್, ಗುಲಬರ್ಗಾ.

೧೯೭೦ : ಜೈಪುರ ಭವನ, ರಾಜಸ್ಥಾನ.

೧೯೭೨ : ರೋಹಿತ ಗ್ರೂಪ್, ಗುಲಬರ್ಗಾ.

೧೯೭೭ : ನಗರಸಭೆ ಆಡಳಿತ ಸಂಸ್ಥೆ, ಹುಬ್ಬಳ್ಳಿ.

೧೯೭೮: ಕಲಾ ಭವನ ಹೈದರಾಬಾದ, (ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ ಪ್ರಾಯೋಜಿತ)

೧೯೭೯-೮೫-೮೬: ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ, ಮದ್ರಾಸ, ಬೆಂಗಳೂರು, ಜೈಪೂರ. ಮುಂಬಯಿ, ಚಂಡೀಘರ್.

೧೯೮೦-೮೯ : ದಕ್ಷಿಣ ಕಲಾ ಮಾದರಿ (Southern Art Trend)

೧೯೮೧-೯೦-೯೧ : ವೆಂಕಟಪ್ಪ ಆರ್ಟ್ ಗ್ಯಾಲರಿ, ಬೆಂಗಳೂರು(ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ ಪ್ರಾಯೋಜಿತ)

೧೯೮೧-೯೦ : ತ್ರಿವೇಣಿ ಕಲಾ ಸಂಗಮ, ನವದೆಹಲಿ.

೧೯೮೧ : ಹೈದರಾಬಾದ (ಗುಲಬರ್ಗಾ ಆರ್ಟ್ ಕೌನ್ಸಿಲ್)

೧೯೮೧-೮೪ : ಅಖಿಲ ಭಾರತ ಗ್ರಾಫಿಕ್ಸ್ ಕಲಾ ಪ್ರದರ್ಶನ, ಗುಲಬರ್ಗಾ.

೧೯೮೨-೯೪: ಜಹಾಂಗೀರ ಆರ್ಟ್‌ಗ್ಯಾಲರಿ, ಮುಂಬೈ.

೧೯೮೩ : ಹೈದರಾಬಾದ ಕರ್ನಾಟಕ ಶಿಕ್ಷಣ ಸಂಸ್ಥೆ, ಗುಲಬರ್ಗಾ.

೧೯೮೩ : ಕರ್ನಾಟಕ ಕಲಾ ಯಾತ್ರೆ ಹಿನ್ನೆಲೆಯಲ್ಲಿ ರಾಜ್ಯದ ೧೫ ಸ್ಥಳಗಳಲ್ಲಿ ಕಲಾಕೃತಿಗಳ ಪ್ರದರ್ಶನ.

೧೯೮೪ : ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೧೯೮೫ : ಮ್ಯಾಕ್ಸ್‌ಮುಲ್ಲರ್ ಭವನ, ಬೆಂಗಳೂರು.

೧೯೮೫-೯೧-೯೩-೯೮ : ಚಿತ್ರಕಲಾ ಪರಿಷತ್, ಬೆಂಗಳೂರು.

೧೯೮೭ : ಕರ್ನಾಟಕ ಸಂಘ, ಮುಂಬೈ.

೧೯೮೮ : ವಿಶ್ವಕನ್ನಡ ಸಮ್ಮೇಳನ ಮ್ಯೂಂಚೆಸ್ಟರ್, ಇಂಗ್ಲೆಂಡ್.

೧೯೮೮-೮೯-೯೦: ಭುವನೇಶ್ವರ, ಗೋವಾ, ಜೈಪೂರ, ದೆಹಲಿ, ಜಮ್ಮು(ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ ಪ್ರಾಯೋಜಿತ)

೧೯೯೦ : ಬಾಲ ಗಂಧರ್ವ ಗ್ಯಾಲರಿ, ಪೂನಾ.

೧೯೯೦-೯೧ : Contemporary of Karnataka, Bombay & Colcutta.

೧೯೯೬ : ಚಿತ್ರ ಯಾತ್ರಾ, ಲಲಿತಕಲಾ ಅಕಾಡೆಮಿ ಕರ್ನಾಟಕ, ಕಲ್ಕತ್ತಾ, ಬಾಂಬೆ ಮತ್ತು ದೆಹಲಿ.

೧೯೯೬ : "Hope" ಗ್ರೂಪ್ ಪ್ರದರ್ಶನ, ಬೆಂಗಳೂರು ಮತ್ತು ಗುಲಬರ್ಗಾ ಗ್ರೂಪ್ ಜಹಾಂಗೀರ ಆರ್ಟ್ ಗ್ಯಾಲರಿ.

೧೯೯೭ : Image ಆರ್ಟ್ ಗ್ಯಾಲರಿ, ಬೆಂಗಳೂರು.

೧೯೯೭ : 50year's india independence, Birla Akademy Culcutta & Renisanss Gallery Bangalore and C.K.P. Bangalore.

೧೯೯೮ : Rensanses Gallery, ಬೆಂಗಳೂರು.

೧೯೯೮ : ಬಿರ್ಲಾ ಅಕಾಡೆಮಿ, ಕಲ್ಕತ್ತ.

೧೯೯೮ : ಬಾಂಬೆ ಆರ್ಟ್ ಸೊಸಾಯಿಟಿ, ಬಾಂಬೆ.

೨೦೦೦ : ಲಲಿತ ಕಲಾ ಅಕಾಡೆಮಿ ಲಕ್ನೋ, ಉತ್ತರ ಪ್ರದೇಶ.

೨೦೦೧ : ತಾಜ್ ಆರ್ಟ್ ಗ್ಯಾಲರಿ, ಮುಂಬೈ.

೨೦೦೩ : ಪಿಲ್ಸನ್ ಮ್ಯಾನ್‌ರ್ ಹೊಟೇಲ್, ಬೆಂಗಳೂರು.

೨೦೦೩ : ೭ನೇ ಕರ್ನಾಟಕ ಕಲಾಮೇಳ, ಬೆಂಗಳೂರು.

೨೦೦೫ : ೫೦ನೇ ವರ್ಷದ ಸುವರ್ಣ ಮಹೋತ್ಸವ ಆಚರಣೆ ಲ.ಕ.ಅ. ದೆಹಲಿ.

೨೦೧೦ : ಮಹಾರಾಷ್ಟ್ರ ರಾಜ್ಯ ಕಲಾ ಪ್ಯಾರಸ್ ಶೋ ೫೦ನೇ ವಾರ್ಷಿಕೋತ್ಸವ, ಮುಂಬಯಿ

**೬.೨. ಕಲಾ ಶಿಬಿರಗಳು**

೧೯೭೬ : ದಕ್ಷಿಣ ಭಾರತದ ಕಲಾ ಶಿಬಿರ, ಸಿ.ಕೆ.ಪಿ ಬೆಂಗಳೂರು.

೧೯೮೧ : ಕರ್ನಾಟಕ ರಾಜ್ಯ ಲಲಿತಕಲಾ ಅಕಾಡೆಮಿ, ಕಲಾವಿದರ ಶಿಬಿರ, ಧಾರವಾಡ.

೧೯೮೨ : ಕರ್ನಾಟಕ ರಾಜ್ಯ ಲಲಿತಕಲಾ ಅಕಾಡೆಮಿ ಹಮ್ಮಿಕೊಂಡ ಕಲಾವಿದರ ಶಿಭಿರ, ಹಂಪಿ.

೧೯೮೫ : ವಿಶ್ವಕನ್ನಡ ಸಮ್ಮೇಳನ ಕಲಾ ಶಿಬಿರ ಮೈಸೂರು.

೧೯೮೫ : ಕೃಷ್ಣಾರೆಡ್ಡಿಯವರ ನೇತೃತ್ವದಲ್ಲಿ ಚಿತ್ರಕಲಾ ಪರಿಷತ್ತಿನ ಆವರಣದಲ್ಲಿ ನಡೆದ ಗ್ರಾಫಿಕ್ ಶಿಬಿರ,

೧೯೮೫ : ಕನ್ನಡ ಮತ್ತು ಸಂಸ್ಕೃತ ಇಲಾಖೆ ನಡೆಸಿದ ಸ್ವಾತಂತ್ರ್ಯ ಸುವರ್ಣ ಮಹೋತ್ಸವ, (ನವದೆಹಲಿ)

೧೯೮೫ : ದಕ್ಷಿಣ ಭಾರತದ ಕಲಾವಿದರ ರೇಖಾ ಚಿತ್ರಗಳ ಶಿಬಿರ, ಸಿ.ಕೆ.ಪಿ ಬೆಂಗಳೂರು.

೧೯೫-೮೬ : ಗ್ರಾಫಿಕ್ಸ್ ಕಲಾ ಶಿಬಿರ ಗುಲಬರ್ಗಾ.

೧೯೮೬ : ಸಾರ್ಕ ಸಮ್ಮೇಳನ ಬೆಂಗಳೂರಿನಲ್ಲಿ ಐಪಾಕ್ಸ ಸಂಸ್ಥೆ ರೂಪಿಸಿದ ಅಖಿಲಭಾರತ ಮಟ್ಟದ ಕಲಾ ಶಿಬಿರ,

೧೯೮೮ : ಪ್ರಾದೇಶಿಕ ಅಕಾಡೆಮಿ ಕಲಾ ಶಿಬಿರ ನಂದಿ ಬೆಟ್ಟ, ಬೆಂಗಳೂರು.

೧೯೯೦ : ಕೇಂದ್ರ ಲಲಿತಕಲಾ ಅಕಾಡೆಮಿ ಕಲಾ ಶಿಬಿರ, ಭುವನೇಶ್ವರ.

೧೯೯೨ : ಕೇಂದ್ರ ಲಲಿತಕಲಾ ಅಕಾಡೆಮಿ  ಕಲಾ ಶಿಬಿರ, ಜಮ್ಮು.

೧೯೯೩ : ಅಖಿಲಭಾರತ ಮಟ್ಟದ ಕಲಾ ಶಿಬಿರ, (ಲಲಿತಕಲಾ ಅಕಾಡೆಮಿ) ಶ್ರೀರಂಗಪಟ್ಟಣ.

೧೯೯೪ : ಕ್ರಿಯಾ ಚೇತನ ಕಲಾ ಶಿಭಿರ ಬೆಂಗಳೂರು.

೧೯೯೬ : ಅಖಿಲ ಭಾರತ ಕಲಾವಿದರ ಶಿಬಿರ ವೆಂಕಟೇಶ್ವರ ಲಲಿತಕಲಾ ಕಾಲೇಜ್, ಹೈದರಾಬಾದ.

೧೯೯೭ : ಮುದ್ರಾ ಕಲಾ ಶಿಬಿರ, ಪೂನಾ.

೨೦೦೦ : ಕನ್ನಡ ಮತ್ತು ಸಂಸ್ಕೃತ ಇಲಾಖೆ ೫೦ ವರ್ಷದ ಸ್ವಾತಂತ್ರ್ಯ ಸುವರ್ಣ ಮಹೋತ್ಸವ, ಬೆಂಗಳೂರು.

೨೦೦೧ : ಮೈಸೂರು ಸೇಲ್ಸ್ ಇಂಟರನ್ಯಾಷನಲ್, ಲಿಮಿಟೆಡ್ (MSIL) ಕಲಾ ಶಿಬಿರ, ಚಿಕ್ಕಮಂಗಳೂರ.

೨೦೦೨ : ಅಖಿಲಭಾರತ ಮಟ್ಟದ ಶಿಬಿರ, ಸಿ.ಕೆ.ಪಿ ಬೆಂಗಳೂರು.

೨೦೦೨ : Painting on bullock crt, ಕಲಾ ಶಿಬಿರ, ಕೀಲಾರ , ಜಿಲ್ಲೆ ಮಂಡ್ಯ.

೨೦೦೨ : ಕರ್ನಾಟಕ ಲಲಿತಕಲಾ ಅಕಾಡೆಮಿ ಶಿಬಿರ, (Director) ರಾಯಚೂರ.

೨೦೦೨ : ಅಖಿಲ ಭಾರತ ಲಲಿತಕಲೆ ಮತ್ತು ಕುಶಲ ಕಲೆ ಸಂಸ್ಥೆಯ ಕಲಾ ಶಿಬಿರ, (AIFACS) ನವದೆಹಲಿ.

೨೦೦೩ : ಪುರಾತತ್ವ ವಿಭಾಗ, ಶ್ರೀರಂಗಪಟ್ಟಣ.

೨೦೦೪ : ರಾಷ್ಟ್ರೀಯ ಕಲಾ ಶಿಬಿರ, ಹಂಪಿ, ಹೊಸಪೇಟೆ

೨೦೦೪ : ರಾಷ್ಟ್ರಮಟ್ಟದ ಕಲಾಶಿಬಿರ, ಹಂಪಿ, ಭಾರತ ಸರಕಾರದ ಪ್ರವಾಸುದ್ಯೋಮಿ ಇಲಾಖೆ ಸಹಾಯೋಗದಲ್ಲಿ.

೨೦೦೪ : ರಾಜ್ಯ ಕಲಾಶಿಬಿರ ಸಿ.ಕೆ.ಪಿ. ಬೆಂಗಳೂರು ಮತ್ತು ಗುಲಬರ್ಗಾ.

೨೦೦೫ : Tsunami Relief ಶಿಬಿರ, ಸಿ.ಕೆ.ಪಿ. ಬೆಂಗಳೂರು.

೨೦೦೫ : ಒಡನಾಡಿ ಸೇವಾ ಸಂಸ್ಥೆ, ರಾಜ್ಯ ಕಲಾ ಶಿಬಿರ, ಮೈಸೂರು.

೨೦೦೬ : ಸಂಶೋಧನಾ ಶಿಬಿರ ಕೆ.ಸಿ ವಿಭಾಗ, ಬೆಂಗಳೂರು.

೨೦೦೬ : ಮಂತ್ರಾಮ ಕಲಾಶಿಬಿರ ಲಲಿತ ಮಹಲ್ ಮೈಸೂರು.

೨೦೦೬ : ಮೈಸೂರು ಲಲಿತ ಮಹಲ್ ಪ್ರವಾಸುದ್ಯೋಮ ಇಲಾಖೆ, ಮೈಸೂರು

೨೦೦೬ : ಕರ್ನಾಟಕ ಸರಕಾರ ಪ್ರವಾಸುದ್ಯೋಮ ಮತ್ತು ಅರಣ್ಯ ಇಲಾಖೆ, ಬನೇರುಘಟ್ಟ

೨೦೦೬ : ಕನ್ನಡ ಮತ್ತು ಸಂಸ್ಕೃತ ಇಲಾಖೆ ಕನ್ನಡ ಭವನ, ಬೆಂಗಳೂರು

೨೦೦೬ : ಗ್ಯಾಲರಿ ಮತ್ತು ಮ್ಯೂಸಿಯಂ ಕರ್ನಾಟಕ ಸರಕಾರ, ಗುಲಬರ್ಗಾ.

೨೦೦೭ : ಶರಣರ ವಚನಗಳ ಶಿಬಿರ, ಧಾರವಾಡ.

೨೦೦೭ : ಕರ್ನಾಟಕ ಪುರಾತತ್ವ ಮತ್ತು ವಸ್ತು ಸಂಗ್ರಾಲಯ ಇಲಾಖೆ,

೨೦೦೮ : ಎಸ್.ಜೆ.ಕೆ. ಸ್ಟೀಲ್ ಪ್ಲ್ಯಾಂಟ್ ಸಂಘಟನಾ ಶಿಬಿರ ಜುಬಲಿ ಹಿಲ್, ಹೈದ್ರಾಬಾದ.

೨೦೦೮ : ಕುವೆಂಪು ಕನ್ನಡ ಕೇಂದ್ರ, ಕನ್ನಡ ಮತ್ತು ಸಂಸ್ಕೃತ ಇಲಾಖೆ, ಬೆಂಗಳೂರು

೨೦೦೯ : ೧೫೦ನೇ ಸ್ವಾತಂತ್ರ್ಯ ಚಳುವಳಿ ಕಲಾಗ್ರಾಮ, ಬೆಂಗಳೂರು.

೨೦೦೯ : ರಾಷ್ಟ್ರಮಟ್ಟದ unleashing Arty Psyche ಶಿಬಿರ, ಗುಲಬರ್ಗಾ.

೨೦೦೯ : ಲಲಿತಕಲಾ ಅಕಾಡೆಮಿ, ಗುಲಬರ್ಗಾ.

೨೦೧೦ : ಟಿ.ಡಿ.ಟಿ ಮತ್ತು ಎ.ಪಿ. ಕಲಾ ಸಮಾಜ ಶಿಬಿರ, ತಿರುಪತಿ.

೨೦೧೦ : ಲ.ಕ.ಅ. ಹಿರಿಯ ಕಲಾವಿದರ ಶಿಬಿರ, ಗುಲಬರ್ಗಾ.

೨೦೧೦ : ಎನ್.ಎಸ್. ಬೇಂದ್ರೆ ಪೌಂಡೇಶನ್ ಶಿಬಿರ, ಪನವೆಲ್ (ಮುಂಬಯಿ)

## ೬.೩ ಪ್ರಶಸ್ತಿ, ಪುರಸ್ಕಾರಗಳು

೧೯೬೩ : ಇಲ್ಲಸ್ಟ್ರೇಟೆಡ್ ವಿಕ್ಲೀಯ ಅಖಿಲಭಾರತ ಮಟ್ಟದ ಕಲಾ ಪ್ರದರ್ಶನದಲ್ಲಿ ಪ್ರಶಸ್ತಿ.

೧೯೬೯ : ಕರ್ನಾಟಕ ಸೆಕೆಂಡರಿ ಎಜುಕೇಶನ್ ಬೋರ್ಡ್ (KSE),ನಗದು ಬಹುಮಾನ.

೧೯೬೯-೭೦ : ಅಖಿಲಭಾರತ ಸಿಕೆಪಿ ಪ್ರಶಸ್ತಿ,

೧೯೭೧ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದಿಂದ ಪ್ರಶಸ್ತಿ.

೧೯೮೨ : ಕರ್ನಾಟಕ ಲಲಿತಕಲಾ ಅಕಾಡೆಮಿ ಪ್ರಶಸ್ತಿ, ಬೆಂಗಳೂರು.

೧೯೮೪ : ಹೈದರಾಬಾದ ಆರ್ಟ್ ಸೊಸೈಟಿ ಪ್ರಶಸ್ತಿ, ಹೈದರಾಬಾದ.

೧೯೮೯ : ಭಾರತ ಸರಕಾರದ ಸಂಸ್ಕೃತಿ ಇಲಾಖೆಯ ಶಿಷ್ಯವೇತನ, ದೆಹಲಿ.

೧೯೯೧ : ಕೆಂದ್ರ ಲಲಿತಕಲಾ ಅಕಾಡೆಮಿ ದೆಹಲಿ ವತಿಯಿಂದ ರಾಷ್ಟ್ರಮಟ್ಟದ ಕಲಾ ಪ್ರಶಸ್ತಿ.

೧೯೯೨ : ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ

೧೯೯೩ : ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ ರಾಜ್ಯ.

೨೦೦೯ : ವರ್ಣಶಿಲ್ಪಿ ವೆಂಕಟಪ್ಪ ಪ್ರಶಸ್ತಿ.

೨೦೧೦ : ಗುಲಬರ್ಗಾ ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ್.

**ಶೈಕ್ಷಣಿಕ ಜವಾಬ್ದಾರಿ**

೧೯೭೪ : ಕರ್ನಾಟಕ ಸರಕಾರದ ಕಲಾಶಿಕ್ಷಣ ಪಠ್ಯಪುಸ್ತಕ ರಚನಾ ಸಮಿತಿಯ ಸದಸ್ಯ.

೧೯೯೦ : ಕರ್ನಾಟಕ ಕಲಾಶಾಲೆಗಳ ಫೆಡರೇಶನ್‌ದ ಕಾರ್ಯದರ್ಶಿ.

೧೯೯೧ : ಜಯಚಾಮರಾಜೇಂದ್ರ ದೃಶ್ಯಕಲಾ ಅಕಾಡೆಮಿ (cava) ಸಲಹೆಗಾರ, ಮೈಸೂರು.

೧೯೯೨ : ಕೇಂದ್ರ ಲಲಿತಕಲಾ ಅಕಾಡೆಮಿ ದೆಹಲಿ, ಸ್ಥಾಯಿ ಸಮಿತಿಯ ಸದಸ್ಯ.

೧೯೯೪ : ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಆಯ್ಕೆ ಸಮಿತಿಯ ಸದಸ್ಯ.

೧೯೯೬-೯೭ : ಕರ್ನಾಟಕ ಸರಕಾರದ ಕಲಾಶಿಕ್ಷಣ ಮಂಡಳಿಯ ಸಲಹೆಗಾರ.

೧೯೭೮-೯೮ : ಕರ್ನಾಟಕ ಲಲಿತಕಲಾ ಅಕಾಡೆಮಿಯ ಸದಸ್ಯನಾಗಿ ಎರಡುಬಾರಿ ಆಯ್ಕೆ.

೧೯೯೮-೨೦೦೧ : ಕರ್ನಾಟಕ ಲಲಿತಕಲಾ ಅಕಾಡೆಮಿ ಅಧ್ಯಕ್ಷ.

೧೯೯೮ : ಗುಲಬರ್ಗಾ ವಿಶ್ವವಿದ್ಯಾಲಯದ ಸಿಂಡಿಕೇಟ್ ಸದಸ್ಯ.

ಇದಲ್ಲದೇ ಗುಲಬರ್ಗಾ ವಿಶ್ವವಿದ್ಯಾಲಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಬೆಂಗಳೂರು ವಿಶ್ವವಿದ್ಯಾಲಯಗಳಲ್ಲಿ ಅಧ್ಯಯನ ಮಂಡಳ ಸದಸ್ಯರಾಗಿ ಕಾರ್ಯನಿರ್ವಹಿಸಿದ್ದಾರೆ.

**ಪ್ರಾತ್ಯಕ್ಷಿಕೆ ಮತ್ತು ಉಪನ್ಯಾಸ**

- ಪಿ.ಡಿ.ಎ. ಇಂಜಿನಿಯರಿಂಗ್ ಕಾಲೇಜ್, ಗುಲಬರ್ಗಾ.
- ಸರಕಾರಿ ಚಿತ್ರಕಲಾ ಶಾಲೆ, ಚನ್ನೈ.
- ವಿಜಯ ಲಲಿತಕಲಾ ಮಹಾವಿದ್ಯಾಲಯ, ಗದಗ.
- ಲಲಿತಕಲಾ ಮಹಾವಿದ್ಯಾಲಯ, ರಾಯಚೂರು.
- ರವೀಂದ್ರ ಕಲಾನಿಕೇತನಾ ಕಲಾಶಾಲೆ, ತುಮಕೂರು.
- ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.
- ಪ್ರಸಾದ ಆರ್ಟ್ ಗ್ಯಾಲರಿ, ಮಂಗಳೂರು.
- ಪತ್ರಿಕೋದ್ಯಮ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

**ಅಂದಾನಿಯವರ ಕಲಾಕೃತಿಗಳ ಸಂಗ್ರಹ**

- ಎಮ್.ಆರ್. ವೈದ್ಯಕೀಯ ಮಾಹಾವಿದ್ಯಾಲಯ
- ಗುಲಬರ್ಗಾ, ಕರ್ನಾಟಕ ಸರಕಾರಿ ಸಂಗ್ರಾಹಾಲಯ, ಚಂಡಿಘಡ
- ಕೇಂದ್ರ ಲಲಿತಕಲಾ ಅಕಾಡೆಮಿ ದೆಹಲಿ
- ಕರ್ನಾಟಕ ಲಲಿತಕಲಾ ಅಕಾಡೆಮಿ
- ಬೆಂಗಳೂರ, ಆಂದ್ರಪ್ರದೇಶ ಲಲಿತಕಲಾ ಅಕಾಡೆಮಿ
- ಪ್ರಾದೇಶಿಕ ಕೇಂದ್ರ ಮದುರಾ ಮತ್ತು ಭುವನೇಶ್ವರ
- ಸರಕಾರಿ ಕಲಾಶಾಲೆ, ದಾವಣಗೆರೆ
- ಬನಸ್ಥಳಿ ವಿದ್ಯಾಪೀಠ, ಜೈಪುರ.
- KSFC ಗುಲಬರ್ಗಾ ಮತ್ತು ಬೆಂಗಳೂರು.
- Scindia Shipping House, ಮುಂಬಯಿ.
- ಮುಂಬಯಿ ವೈಮಾನಿಕ ಸಂಸ್ಥೆ.
- ಮೈಸೂರು Lamps Limited, ಬೆಂಗಳೂರು.
- ಕರ್ನಾಟಕ Tourism,ವಿಭಾಗ, ಹುಬ್ಬಳ್ಳಿ ನಗರಸ
- ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
- ಕರ್ನಾಟಕ ಭವನ ಹೊಸ ದೆಹಲಿ.
- H.K.E ಸಂಸ್ಥೆ, ಗುಲಬರ್ಗಾ.

- S.C.Z.C.C ನಾಗಪೂರ.
- ವಿಜಯ ಕಾಲೇಜ ಆಫ್ ಫೈನ್ ಆರ್ಟ್ ಗದಗ.
- ಸ್ಕೂಲ್ ಆಫ್ ಆರ್ಟ್ ರಾಯಚೂರ,
- ರವಿಂದ್ರನಾಥ ಕಲಾನಿಕೇತನ,ತುಮಕೂರು,
- Folklore ಸಂಗ್ರಹಾಲಯ ಮೈಸೂರು ವಿಶ್ವವಿದ್ಯಾಲಯ,
- ಸರಕಾರಿ ಸಂಗ್ರಹಾಲಯ ಗದಗ,
- ರಾಜೇಶ್ರೀ ಸಿಮೆಂಟ್ಸ್ ಆದಿತ್ಯನಗರ ಮಳಖೇಡ.[೪೧]
- ೧೯೯೫ : ಬೆಂಗಳೂರಿನಲ್ಲಿ ೮ನೇ ರಾಷ್ಟ್ರೀಯ ಕಲಾಮೇಳದ ಸಂಪೂರ್ಣ ಜವಾಬ್ದಾರಿ ಹೊತ್ತು ಆ ಸಮ್ಮೇಳನದ ಅಭೂತಪೂರ್ವ ಯಶಸ್ವಿಗೂ ವ್ಹಿ.ಜಿ. ಅಂದಾನಿಯವರು ಕಾರಣಿಭೂತರಾಗಿದ್ದಾರೆ.

ದಿ' ಐಡಿಯಲ್ ಫೈನ್ ಆರ್ಟ್ ಸಂಸ್ಥೆ ಈ ವಿದ್ಯಾಲಯವು ಗುಲಬರ್ಗಾದ ಹೃದಯಭಾಗದಲ್ಲಿದ್ದು ಅಷ್ಟೇ, ಕಲಾ ವಿದ್ಯಾರ್ಥಿಗಳಿಗೆ ಹೇಳಿ ಮಾಡಿಸಿದಂತಿದೆ. ಅಲ್ಲಿಯ ವಾತಾವರಣಕ್ಕೆ ತಕ್ಕಂತೆ ಅಂದಾನಿಯವರು ಅನೇಕ ಶಿಲ್ಪಗಳನ್ನು, ಭಿತ್ತಿ ಚಿತ್ರಗಳನ್ನು ತಾವೇ ಖುದ್ದಾಗಿ ನಿಂತು ಮಾಡಿಸಿರುವುದು ಮತ್ತು ಮಾಡಿರುವುದು ಅವರ ಆಸಕ್ತಿಗೆ ಕನ್ನಡಿಯಾಗಿದೆ.

ಹೈದರಾಬಾದ ಕರ್ನಾಟಕ ಭಾಗದಲ್ಲಿ ಅತ್ಯಂತ ದೊಡ್ಡ 'ಕಲಾ ಸಂಸ್ಥೆ' ಎಂಬ ಹೆಸರು ಪಡೆದಿರುವ ದಿ' ಐಡಿಯಲ್ ಫೈನ್ ಆರ್ಟ್ ಸಂಸ್ಥೆಯಲ್ಲಿ ಒಂದು ಸಾವಿರಕ್ಕಿಂತಲೂ ಹೆಚ್ಚು ಕಲಾಕೃತಿಗಳಿವೆ. ಭಾವಚಿತ್ರ, ಸಾಂಪ್ರದಾಯಿಕ ಚಿತ್ರ, ಆಧುನಿಕ ಚಿತ್ರ, ಸಮಕಾಲೀನ ಚಿತ್ರಗಳು, ತೈಲ ವರ್ಣ, ಜಲವರ್ಣ, ಅಕ್ರಾಲಿಕ, ಮರ, ಸಿಮೆಂಟ್, ಪ್ಲಾಸ್ಟರ್, ಟೆರಾಕೋಟಾ, ಇತರೆ ಕಲಾಕೃತಿಗಳು ಸಂಗ್ರಹದಲ್ಲಿವೆ. ಸಂಸ್ಥೆ ಆಧುನಿಕತೆ ತಂತ್ರಜ್ಞಾನವನ್ನು ಮೈಗೂಡಿಸಿಕೊಂಡಿದೆ. ಇದಲ್ಲದೆ ಜನಪದ ಕಲೆಗಳ ಸಂಗ್ರಹಾಲಯ, ಕಲಾ ಪ್ರದರ್ಶನಾಲಯಗಳ ಸೊಸೈಟಿಯ ಅಂಗ ಸಂಸ್ಥೆಗಳಂತಿವೆ. ಅಂದಾನಿಯವರ ಈ ಪ್ರದೇಶದ ಸಾಂಪ್ರದಾಯಿಕ ಹಾಗೂ ಜಾನಪದ ಕಲಾ ಕೃತಿಗಳನ್ನು, "ಲೋಹದ ಮೂರ್ತಿ ಶಿಲ್ಪ, ಮರದ ಉಪಕರಣಗಳು, ಗಾಜಿನ ಫಲಕದ ಚಿತ್ರಗಳು, ಉದ್ಧರಣೆ ವಚನದ ಕಟ್ಟುಗಳು, ಇತ್ಯಾದಿ ಸಾವಿರಕ್ಕೂ ಮಿಕ್ಕಿದ ಕಲಾಕೃತಿಗಳನ್ನು ಸಂಗ್ರಹಿಸಿದ್ದು, ಸಂಸ್ಥೆಗೆ ನೀಡಿದ್ದಾರೆ. ಆಗಿಂದಾಗೆ ನಡೆಯುವ ಕಲಾ ಶಿಬಿರಗಳು, ಕಾರ್ಯಾಗಾರಗಳು, ಪ್ರಾತ್ಯಕ್ಷಿಕೆಗಳು ಇತ್ಯಾದಿಗಳಿಂದ ಸಂಗ್ರಹಿತವಾದ ಸಮಕಾಲೀನ ಕಲಾಕೃತಿಗಳ ಸಂಗ್ರಹವು ಸಾಕಷ್ಟಿದ್ದು, ಪ್ರದರ್ಶನಾಲಯದಲ್ಲಿ ವ್ಯವಸ್ಥಿತವಾಗಿ ಪ್ರದರ್ಶಿಸಲಾಗಿದೆ. ಕಲೆಗೆ ಸಂಬಂದಿಸಿದಂತೆ ಪ್ರೌಢಗ್ರಂಥಗಳಿಂದ ಕೂಡಿದ ಸೂಸಜ್ಜಿತ ಗ್ರಂಥಾಲಯವಿದೆ, ಕಲಾಕೃತಿಗಳ ವರ್ಣ ಪಾರದರ್ಶಿಕೆಗಳು ಛಾಯಾಚಿತ್ರಗಳ ಸಂಗ್ರಹವಿದ್ದು, ಕಲಾಚರಿತ್ರೆಯ ತರಗತಿಯಲ್ಲಿ ಬಳಸಿಕೊಳ್ಳಲಾಗುತ್ತದೆ. ಪ್ರಾದೇಶಿಕ

ಮಟ್ಟದಲ್ಲಿ ಚಿತ್ರ ಗ್ರಾಫಿಕ್ಸ್, ವಾಣಿಜ್ಯ ಕಲೆಗಳ ಕಲಾಗಾರಗಳನ್ನು ರಾಷ್ಟ್ರೀಯ ಮಟ್ಟದಲ್ಲಿ ರಾಜ್ಯ, ಕೇಂದ್ರ ಅಕಾಡೆಮಿ ಇತ್ಯಾದಿ ಸಂಯೋಗದೊಂದಿಗೆ ಮೃತ ಶಿಲ್ಪ, ಶೀಲಾ ಶಿಲ್ಪ, ಹಾಗೂ ಲೋಹಶಿಲ್ಪಗಳ ಕಲಾಗಾರಗಳನ್ನು ಅಖಿಲ ಭಾರತ ಮಟ್ಟದಲ್ಲಿ ಕಲಾ ಶಿಕ್ಷಣ ಕುರಿತು ಸಂಕಿರಣವೊಂದನ್ನು ಏರ್ಪಡಿಸಿದೆ. ಹೀಗೆ ಅನೇಕ ರಿತಿಯ ಕಲಾ ಸಂಗ್ರಹಗಳನ್ನು ಇಲ್ಲಿ ಕಾಣಬಹುದಾಗಿದೆ".[೬೩]

ವ್ಹಿ.ಜಿ ಅಂದಾನಿಯವರನ್ನು ಕುರಿತು ಹಾಗೂ ಅವರು ಸಂಪಾದಿಸಿದ ಕೃತಿಗಳು ಮತ್ತು ಅವರು ಬರೆದ ಲೇಖನಗಳು ಬಂದಿರುವುದು ಕಂಡುಬರುತ್ತದೆ. ಅಂದಾನಿಯವರು ಚಿತ್ರಕಲೆಗೆ ನೀಡಿದಷ್ಟು ಮಹತ್ವವನ್ನು ಸಾಹಿತ್ಯ ಲೋಕಕ್ಕೂ ನೀಡಿರುವುದು ಗಮನಾರ್ಹ. ಬಹುತೇಕವಾಗಿ ಕಲಾವಿದರು ಕಲೆಯನ್ನು ಪ್ರೀತಿಸುತ್ತಾರೆ, ಗೌರವಿಸುತ್ತಾರೆ, ಆರಾದಿಸುತ್ತಾ, ಇರುವುದನ್ನು ಕಲಾಲೋಕದಲ್ಲಿ ಇರುವುದನ್ನು ಕಂಡು ಬರುತ್ತದೆ. ಆದರೆ ಸಾಹಿತ್ಯವನ್ನು ಸಹ ಮೈಗೂಡಿಸಿಕೊಂಡವರು ವಿರಳ. ಅವರಲ್ಲಿ ಅಂದಾನಿಯವರು ಸಾಹಿತ್ಯ ಲೋಕದೊಂದಿಗೆ ಗುರುತಿಸಿಕೊಂಡಿರುವುದು ಇಲ್ಲಿ ಅವರ ಅನನ್ಯತೆಯನ್ನು ಕಾಣಬಹುದಾಗಿದೆ. ಇಂತಹ ಸಂದರ್ಭದಲ್ಲಿ ಅಂದಾನಿಯವರು ಕೆಲವು ಕೃತಿಗಳನ್ನು ಸಂಪಾದಿಸಿ, ಲೇಖನಗಳನ್ನು ಪ್ರಕಟಿಸಿದರೆ, ಇನ್ನು ಕೆಲವು ಕೃತಿಗಳಲ್ಲಿ ಅವರ ಬರಹಗಳು ಮಾಡುವುದನ್ನು ಗಮನಿಸಬಹುದಾಗಿದೆ. ಈ ಕುರಿತು ಪ್ರಸ್ತುತ ಸಂದರ್ಭದಲ್ಲಿ ಅಭ್ಯಸಿಸುವ ಪ್ರಯತ್ನ ಮಾಡಲಾಗಿದೆ.

ಪಿ.ಆ ತಿಪ್ಪೇಸ್ವಾಮೀ ಹಾಗೂ ಅ.ಲ.ನರಸಿಂಹನ್ ಮತ್ತು ಎನ್. ಮರಿಶ್ಯಾಮಾಚಾರ್ ಅವರು ಪ್ರಧಾನ ಸಂಪಾದಕತ್ವದಲ್ಲಿ ಹೊರ ಬಂದಿರುವ " " ಎಂಬ ಕೃತಿಯನ್ನು ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ ಪ್ರಕಟಿಸಲಾಗಿದೆ. ಈ ಕೃತಿಯಲ್ಲಿ ವ್ಹಿ.ಜಿ. ಅಂದಾನಿಯವರು ಎರಡು ಲೇಖನಗಳು ಈ ಪ್ರಕಟಗೊಂಡಿವೆ. ಅವುಗಳಲ್ಲಿ ಮೊದಲನೆಯದ್ದು '

'' ಹಾಗೂ ಎರಡನೆಯದ್ದು ' ' ಎಂಬುದು ಪ್ರಮುಖವಾಗಿವೆ. ಈ ಲೇಖಕನಗಳಲ್ಲಿ ಈ ಪರಿಸರದಲ್ಲಿ ಚಿತ್ರಕಲೆ ಬೆಳೆದುಬಂದ ಪರಂಪರೆಯನ್ನು ಕುರಿತು ಗಮನ ಸೆಳೆದಿದ್ದಾರೆ. ಆಗೆಯೇ ಚಿತ್ರಕಲೆಯ ಶಿಕ್ಷಣವನ್ನು ಮಕ್ಕಳಿಗೆ ನೀಡಬೇಕು ಎಂಬ ಒತ್ತಾಯ ಅವರದ್ದಾಗಿದೆ. ಭವಿಷ್ಯದ ಬುನಾದಿಗೆ ಸದೃಢರಾಗಲು ಚಿತ್ರಕಲೆಯ ಶಿಕ್ಷಣವನ್ನು ಮಕ್ಕಳಿಗೆ ನೀಡುವುದು ಅವಶ್ಯವೆಂದು ಹೇಳುವದು ಗಮನೀಯ.

ವ್ಹಿ.ಜಿ. ಅಂದಾನಿಯವರ ಸಾಧನೆಯ ಹಿನ್ನೆಲೆಯಲ್ಲಿ ಅವರನ್ನು ಕುರಿತು ಅಂದಾನಿ ಗೆಳೆಯರ ಬಳಗ, ಗುಲಬರ್ಗಾ ವತಿಯಿಂದ ಚಂದ್ರಹಾಸ್. ವೈ. ಜಾಲಿಹಾಳ ಸಂಪಾದಕತ್ವದಲ್ಲಿ " " ಎಂಬ ಕೃತಿಯನ್ನು ಹೊರತರಲಾಗಿದೆ. ಈ ಕೃತಿಯಲ್ಲಿ ವ್ಹಿ.ಜಿ. ಅಂದಾನಿಯವರ ಬಗ್ಗೆ ಬಂದಿರುವ ಲೇಖನಗಳು, ವ್ಹಿ.ಜಿ. ಅಂದಾನಿಯವರು ಬರೆದಿರುವ ಲೇಖನಗಳು, ಕಲಾವಿದ ಅಂದಾನಿಯವರ ಬಗ್ಗೆ ಪತ್ರಿಕೆಗಳ ಅಭಿಪ್ರಾಯದ ಲೇಖನಗಳು ಹಾಗೂ ಕಲಾವಿದರ ಬಗ್ಗೆ ಗಣ್ಯರ ನುಡಿಗಳು ಎಂಬ ಬರಹಗಳನ್ನು ಹೊತ್ತು ಬಂದಿರುವ ಮಹತ್ವದ ಕೃತಿಯಾಗಿದೆ. ಈ ಕೃತಿಯಲ್ಲಿ

ಕರ್ನಾಟಕದ ವಿವಿಧ ಭಾಗಗಳಲ್ಲಿ ಗುರುತಿಸಿಕೊಂಡಿರುವ ದೊಡ್ಡ ದೊಡ್ಡ ಸಾಹಿತಿಗಳು, ಚಿಂತಕರು, ಬರಗಾರರು ಮುಂತಾದವರು ಅಂದಾನಿಯವರ ಸಾಧನೆಯನ್ನು ಕುರಿತು ಅತ್ಯಂತ ವಾಸ್ತವದ ನೆಲೆಯಲ್ಲಿ ಪ್ರಸ್ತುತ ಪಡಿಸಿರುವುದನ್ನು ಈ ಕೃತಿಯಲ್ಲಿ ಕಾಣಬಹುದಾಗಿದೆ.

ವ್ಹಿಜಿ. ಅಂದಾನಿಯವರ ಚಿತ್ರಕಲಾ ಲೋಕವನ್ನು ಕುರಿತು ಡಾಶಿವಾನಂದ. ಎಚ್. ಬಂಟನೂರ ಅವರು "ವ್ಹಿ.ಜಿ. ಅಂದಾನಿ" ಎಂಬ ಕೃತಿಯನ್ನು ಹೊರತಂದಿದ್ದಾರೆ. ಇದನ್ನು ಕರ್ನಾಟಕ ಲಲಿತಕಲಾ ಅಕಾಡೆಮಿ ವತಿಯಿಂದ ೨೦೦೪ರಲ್ಲಿ ಪ್ರಕಟಿಸಲಾಗಿದೆ. ಈ ಕೃತಿಯಲ್ಲಿ ಅಂದಾನಿಯವರ ಸಾಧನೆಯ ಜೊತೆಗೆ ಅವರ ಕಲೆಯ ವಿವಿಧ ಆಯಾಮಗಳನ್ನು ಕುರಿತು ಪ್ರಯತ್ನ ಮಾಡಲಾಗಿದೆ. ಕನ್ನಡ ಮತ್ತು ಇಂಗ್ಲೀಷನಲಿ ಅಂದಾನಿಯವರ ಕುರಿತು ಸಂಕ್ಷಿಪ್ತ ಜೀವನ ಪರಿಚಯವನ್ನು ಸಹ ಇಲ್ಲಿ ತಿಳಿಸಿರುವುದು ಕಂಡುಬುತ್ತದೆ.

ಡಾ. ವ್ಹಿ.ಜಿ.ಅಂದಾನಿ ಮತ್ತು ಡಾ.ಡಿ.ಬಿ.ನಾಯಕ ಅವರ ಸಂಪಾದಕತ್ವದಲ್ಲಿ " ಎಂಬ ಲೇಖನಗಳ ಸಂಗ್ರಹ ಕೃತಿಯನ್ನು ಹೊರತರಲಾಗಿದೆ. ಈ ಕೃತಿಯನ್ನು ೨೦೧೦ರಲ್ಲಿ ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾದಿಂದ ಪ್ರಕಟಿಸಲಾಗಿದೆ. ಈ ಕೃತಿಯಲ್ಲಿ ಚಿತ್ರಕಲೆ ಕ್ಷೇತ್ರದಲ್ಲಿ ಗಮನಾರ್ಹ ಸಾಧನೆ ಮಾಡಿದ ಗೌರವಾನ್ವಿತರ ಕುರಿತು ಲೇಖನಗಳನ್ನು ಬರೆಯಲಾಗಿದೆ. ಜೊತೆಗೆ ದೃಶ್ಯಕಲಾ ಪ್ರಶಸ್ತಿ ಪಡೆದ ಮಹನೀಯರನ್ನು ಕುರಿತು ತಿಳಿಸುವ ಮಹತ್ವದ ಕೃತಿಯಾಗಿದೆ. ಈ ಕೃತಿಯಲ್ಲಿ ಅಂದಾನಿಯವರ ಕುರಿತು ಲೇಖನವನ್ನು ಪ್ರಕಟಿಸಲಾಗಿದೆ.

ಡಾ. ವ್ಹಿ.ಜಿ.ಅಂದಾನಿ ಅವರ ಸಂಪಾದಕತ್ವದಲ್ಲಿ " " ಎಂಬ ಲೇಖನಗಳ ಸಂಗ್ರಹ ಕೃತಿಯನ್ನು ಹೊರತರಲಾಗಿದೆ. ಈ ಕೃತಿಯನ್ನು ಕರ್ನಾಟಕ ಲಲಿತಕಲಾ ಅಕಾಡೆಮಿ ವತಿಯಿಂದ ೧೯೯೮-೧೯೯೯ರಲ್ಲಿ ಪ್ರಕಟಿಸಲಾಗಿದೆ. ಈ ಕೃತಿಯಲ್ಲಿ ಅಕಾಡೆಮಿಯಿಂದ ಹಮ್ಮಿಕೊಂಡ ಕಲಾ ಪ್ರದರ್ಶನಗಳು, ಕಾರ್ಯಾಗಾರಗಳು. ಸುವರ್ಣ ಮಹೋತ್ಸವದಲ್ಲಿ ಕಲಾವಿದರ ಅಭಿವ್ಯಕ್ತಿ, ಹಿಗೆ ಮುಂತಾದವು ಕಲೆ, ಕಲಾ ಪ್ರದರ್ಶನ ಕುರಿತಾಗಿ ಕನ್ನಡದಲ್ಲಿ ೧೮ ಲೇಖನಗಳು ಮತ್ತು ಇಂಗ್ಲೀಷನಲ್ಲಿ ೧೦ ಲೇಖನಗಳು ಇವೆ. ಜೊತೆಗೆ ಕಲೆ ಮತ್ತು ಅಶ್ಲೀಲತೆ ಕಾರ್ಗಿಲ್ ನೆರವಿಗೆ ಧಾರವಾಡ ಕಲಾವಿದರು ಕುರಿತು ತಿಳಿಸುವ ಕೃತಿಯನ್ನು ಕರ್ನಾಟಕದ ವಿವಿಧ ಭಾಗಗಳಲ್ಲಿ ಗುರುತಿಸಿಕೊಂಡಿರುವ ಸಾಹಿತಿಗಳು ಮತು ಬರಹಗಾರರು ಮುಂತಾದವರು ಕಲೆಯ ಮತ್ತು ಕಲಾ ಪ್ರದರ್ಶನ, ಕಾರ್ಯಾಗಾರಗಳ ಕುರಿತು ಲೇಖನಗಳನ್ನು ಬರೆಯಲಾಗಿದೆ. ಇದು ಅಂದಾನಿಯವರು ಕರ್ನಾಟಕ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರು ಆದ ಸಂದರ್ಭದಲ್ಲಿ ಹೊರತಂದಂತ ಮಹತ್ವದ ಕೃತಿಯಾಗಿದೆ.

ವ್ಹಿ.ಜಿ ಅಂದಾನಿಯವರು ಸಂಪಾದಕತ್ವದಲ್ಲಿ ಮತ್ತು ರೇಖಾ ಚಿತ್ರಗಳನ್ನು ಕುರಿತು ಪ್ರತ್ಯೇಕ ಕೃತಿಯನ್ನು ಹೊರತರಲಾಗಿದೆ. ಅದೆಂದರೆ " ಎಂಬ ಕೃತಿಯಾಗಿದೆ ಈ ಕೃತಿಯಲ್ಲಿ

ವ್ಹಿ.ಜಿ.ಅಂದಾನಿಯವರು ಮತ್ತು ಅವರು. ಬರೆದ ಕಲೆಯ ಕುರಿತು ಇಂಗ್ಲೀಷನಲ್ಲಿ ಲೇಖನಗಳಿವೆ. ಡಾ.ಶಿವಾನಂದ. ಎಚ್. ಬಂಟನೂರ ಮತ್ತು ಕೆ.ವಿ.ಸುಬ್ರಮಣ್ಯಂ ಅವರು ಬರೆದ ಅಂದಾನಿಯವರ ಬಗ್ಗೆ ಮತ್ತು ಅವರ ಕಲಾಕೃತಿಗಳ ಕುರಿತು ಸಂಕ್ಷಿಪ್ತವಾಗಿ ಬರೆದ ಲೇಖನಗಳಿವೆ. ಜೊತೆಗೆ ಅಂದಾನಿಯವರು ತಮ್ಮ ಚಿತ್ರಕಲೆಯಲ್ಲಿ ಪ್ರಮುಖವಾಗಿ ಗುರುತಿಸಿಕೊಂಡಿದ್ದ ರೇಖಾ ಚಿತ್ರಗಳನ್ನು ಈ ಕೃತಿಯಲ್ಲಿ ಸ್ಪಷ್ಟವಾಗಿ ಚಿತ್ರಿಸಲಾಗಿದೆ. ರೇಖಾ ಚಿತ್ರಗಳು ಅನೇಕ ಸೂಕ್ಷ್ಮ ಸಂವೇದನೆಯ ಪ್ರತೀಕಗಳಾಗಿ ಇಲ್ಲಿ ರೂಪಗೊಂಡಿರುವುದನ್ನು ಕಾಣಬಹುದಾಗಿದೆ. ಈ ಕೃತಿಯನ್ನು ನೀಲಂಗಳ ಪ್ರಕಾಶನದಿಂದ ೨೦೦೩ರಲ್ಲಿ ಪ್ರಕಟಿಸಲಾಗಿದೆ. ಇದೊಂದು ಮಹತ್ವದ ಕೃತಿಯೊಂದು ಗುರುತಿಸಬಹುದಾಗಿದೆ.

**ಟಿಪ್ಪಣಿ**

೪೧. ವ್ಹಿ.ಜಿ ಅಂದಾನಿ: ಡಾ.ಶಿವಾನಂದ ಎಚ್ ಬಂಟನೂರ ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು. ಪುಟ.೪೭

೪೨. ಸಂ. ಚಂದ್ರಹಾಸ ಜಾಲಿಹಾಲ: ಕಲಾವಿದ ಅಂದಾನಿ ಐವತ್ತು: ಪುಟ.೧೦೦-೩

೪೩. ಗುಲಬರ್ಗಾ ಜಿಲ್ಲೆ ಭಾರತ ಗ್ಯಾಸೆಟಿಯರ್ ಪುಟ.೫೮೮

## ಅಧ್ಯಾಯ–ಏಳು

# ಸಮಾರೋಪ

ಬಹುಮುಖೀ ಕಲಾಸಾಧಕ ವ್ಹಿ.ಜಿ.ಅಂದಾನಿಯವರ ಕುರಿತಾಗಿರುವ ಈ ಪ್ರಬಂಧದಲ್ಲಿ ಒಟ್ಟು ಏಳು ಅಧ್ಯಾಯಗಳಲ್ಲಿ ವಿಷಯ ನಿರೂಪಣೆ ಮಾಡಲಾಗಿದೆ. ಪ್ರತಿಯೊಂದು ಅಧ್ಯಾಯಗಳಲ್ಲಿ ಚರ್ಚಿಸಲ್ಪಟ್ಟ ಸಂಗತಿಗಳ ಸಂಕ್ಷಿಪ್ತ ಸ್ವರೂಪದ ಫಲಿತಗಳು ಈ ಕೆಳಗಿನಂತಿವೆ.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆಗಳ ಕುರಿತು ಹೇಳಲಾಗಿದೆ. ಪ್ರಸ್ತುತ ಅಧ್ಯಯನವನ್ನು ಏತಕ್ಕಾಗಿ ಕೈಗೊಳ್ಳಲಾಗಿದೆ, ಅದರ ಉದ್ದೇಶಗಳು, ಅಧ್ಯಯನದ ಮಹತ್ವ, ಕಲಾಕ್ಷೇತ್ರಕ್ಕೆ ಮತ್ತು ಸಾಮಾಜಿಕವಾಗಿ ಅದರ ಉಪಯುಕ್ತತೆ ಮುಂತಾದವುಗಳನ್ನು ಬಿಂಬಿಸಲಾಗಿದೆ. ಜೊತೆಗೆ ಅಂದಾನಿಯವರ ಬಗ್ಗೆ ಇದುವರೆಗೆ ನಡೆದ ಅಧ್ಯಯನಗಳನ್ನು ಸಮೀಕ್ಷಿಸಲಾಗಿದೆ. ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ಕೈಗೊಂಡ ವೈಧಾನಿಕತೆಗಳ ಕುರಿತು ಅಧ್ಯಾಯದಲ್ಲಿ ಸ್ಪಷ್ಟಪಡಿಸಲಾಗಿದೆ.

ಎರಡನೆಯ ಅಧ್ಯಾಯನವು ಅಂದಾನಿಯವರ ಬಾಲ್ಯ, ಪರಿಸರ ಮತ್ತು ಶಿಕ್ಷಣಗಳ ಕುರಿತಾಗಿದೆ. ಇದರಲ್ಲಿ ಅಂದಾನಿಯವರು ಹುಟ್ಟಿದ ಹೊನ್ನಕಿರಣಗಿಯ ಸಾಂಸ್ಕೃತಿಕ ಪರಿಸರ, ಜನಪದ ಕಲೆಗಳ ಹಿನ್ನೆಲೆಗಳನ್ನು ಬಿಂಬಿಸಲಾಗಿದೆ. ಇದರೊಂದಿಗೆ ಅಂದಾನಿಯವರ ಕೌಟುಂಬಿಕ ಹಿನ್ನೆಲೆ, ತಂದೆ ತಾಯಿಗಳು, ಬಂಧುವರ್ಗ, ಬಾಲ್ಯದ ದಿನಗಳು, ಗ್ರಾಮೀಣ ಆಟಗಳು, ಜನಪದ ಆಚರಣೆಗಳ ಹಿನ್ನೆಲೆಯನ್ನು ತಿಳಿಸಲಾಗಿದೆ. ಬಾಲ್ಯದಲ್ಲಿ ಕಲೆಯ ಕಡೆಗೆ ಒಲಿದ ಮನಸ್ಥಿತಿ, ಅದಕ್ಕೆ ಪೂರಕವಾದ ಗ್ರಾಮ್ಯ ಪರಿಸರ, ಪ್ರಾಥಮಿಕ ಶಿಕ್ಷಣದಲ್ಲಿ ಕೈಗೊಂಡ ಕಲಾ ಚಟುವಟಿಕೆಗಳು, ಪ್ರೌಢಶಾಲಾ ಹಂತದಲ್ಲಿ ಹೆಚ್ಚಾದ ಅವರ ಕಲಾ ಆಸಕ್ತಿ ಪ್ರಭಾವ ಬೀರಿದ ಕಲಾ ಶಿಕ್ಷಕರ ಕುರಿತಾಗಿ ಇಲ್ಲಿ ತಿಳಿಸಲಾಗಿದೆ.

ಪ್ರೌಢಶಾಲೆಯ ಅಧ್ಯಯನಕ್ಕೆ ಗುಲಬರ್ಗಾಕ್ಕೆ ತೆರಳಿದ್ದು, ಅಲ್ಲಿನ ನಗರ ಜೀವನದ ಪ್ರಭಾವ, ಬಿಡುವಿನ ದಿನಗಳಲ್ಲಿ ಹಳ್ಳಿಗೆ ತೆರಳಿ ಹಬ್ಬಹರಿ ದಿನಗಳಲ್ಲಿ ಪಾಲ್ಗೊಳ್ಳುವುದು, ಮಾರುಕಟ್ಟೆಗಾಗಿ ಶಾಹಬಾದ್ ಪಟ್ಟಣಕ್ಕೆ ಹೋಗುವುದು, ಖುಷಿಯಿಂದ ಸಾಮಾನು ಖರೀದಿಸುವುದು, ಸಿನಿಮಾ ನೋಡುವುದು ಇವೆಲ್ಲ ಘಟನೆಗಳು ಅವರ ಕಲಾಬದುಕಿನಲ್ಲಿ ಪರಿಣಾಮ ಬೀರಿರುವುದನ್ನು ಈ ಅಧ್ಯಾಯದಲ್ಲಿ ಕಂಡುಕೊಳ್ಳಲಾಗಿದೆ. ಇದಲ್ಲದೆ ವಿಜ್ಞಾನ ವಿಷಯದ ಕಲಿಕೆಗಾಗಿ ಹುಬ್ಬಳ್ಳಿಗೆ ತೆರಳಿದ್ದು, ಅಲ್ಲಿ ಪಾಟೀಲ ಪುಟ್ಟಪ್ಪನವರನ್ನು ಭೇಟಿಯಾಗಿ ಜೀವನದಲ್ಲಿ ಕಲೆಯ ಆಸಕ್ತಿಯನ್ನು ಜೊತೆಗೆ ಬರವಣಿಗೆಯ

ಆಸಕ್ತಿಯನ್ನು ಹೆಚ್ಚಿಸಿಕೊಂಡಿದ್ದನ್ನು ಪರಿಶೀಲಿಸಲಾಗಿದೆ. ವಿಜ್ಞಾನ ವಿಷಯದ ಕಲಿಕೆಯನ್ನು ಮೊಟಕುಗೊಳಿಸಿ ಗುಲಬರ್ಗಾಕ್ಕೆ ಆಗಮಿಸಿ ಕಲಾಶಿಕ್ಷಣವನ್ನು ಪಡೆದುಕೊಳ್ಳತೊಡಗಿದ ಸಂಗತಿ ಅಲ್ಲಿನ ಕಲಾ ಶಿಕ್ಷಕರು, ಮಿತ್ರರು, ಸಹಪಾಠಿಗಳೊಂದಿಗೆ ಕಲೆಯನ್ನು ಪರಿಣಾಮಕಾರಿಯಾಗಿ ಹೇಗೆ ಕಲಿತರು ಎಂಬಂತಹ ಪ್ರಮುಖ ಸಂಗತಿಗಳನ್ನು ಎರಡನೆಯ ಅಧ್ಯಾಯದಲ್ಲಿ ವಿವೇಚಿಸಲಾಗಿದೆ.

ಮೂರನೆಯ ಅಧ್ಯಾಯವು ಅಂದಾನಿಯವರ ಕಲಾಬದುಕು ಮತ್ತು ಐಡಿಯಲ್ ಫೈನ್‌ಆರ್ಟ್ಸ್ ಸಂಸ್ಥೆಯ ಬೆಳವಣಿಗೆಯನ್ನು ಕುರಿತಾಗಿದೆ. ಇದರಲ್ಲಿ ಅಂದಾನಿಯವರು ಕಲಾಶಿಕ್ಷಣ ಪೂರೈಸಿದ ನಂತರ ಗ್ರಿನೋಬಲ್ಸ್ ಮುದ್ರಣಾಲಯದಲ್ಲಿ ಕೆಲಸಕ್ಕೆ ಸೇರಿಕೊಂಡಾಗಿನ ಹಂತದಿಂದ ಇಂದಿನವರೆಗೆ ಅವರ ಕಲಾ ಬದುಕು ಯಾವ ರೀತಿ ನಡೆದು ಬಂದಿತು ಎಂಬುದನ್ನು ವಿವರಿಸಲಾಗಿದೆ. ಮುದ್ರಣಾಲಯದಲ್ಲಿ ಕೆಲಸ ಮಾಡುತ್ತಲೇ ಐಡಿಯಲ್ ಫೈನ್‌ಆರ್ಟ್ಸ್ ಕಲಾಶಾಲೆಯ ಜವಾಬ್ದಾರಿಯನ್ನು ವಹಿಸಿಕೊಂಡಿದ್ದು, ಅದರ ಬೆಳವಣಿಗೆಗಾಗಿ ಹಗಲಿರುಳೂ ತನು ಮನ ಧನಪೂರ್ವಕವಾಗಿ ದುಡಿದ ರೀತಿಯನ್ನು ಇಲ್ಲಿ ಗಮನಿಸಲಾಗಿದೆ. ಬಾಡಿಗೆ ಕಟ್ಟಡದಲ್ಲಿ ನಡೆಯುತ್ತಿದ್ದ ಕಲಾಶಾಲೆಗೆ ಪ್ರತ್ಯೇಕ ಬಯಲು ಜಾಗೆಯನ್ನು ದಾನಿಗಳಿಂದ ಪಡೆದುಕೊಂಡು, ಅಲ್ಲಿ ತಗಡಿನ ಶೆಡ್ ನಿರ್ಮಿಸಿ ಕೇವಲ ಒಂದೇ ವರ್ಷದಲ್ಲಿ ಛಲದಿಂದ ಕಟ್ಟಡ ನಿರ್ಮಿಸಲು ಪ್ರಾರಂಭಿಸಿದ್ದು ಇವರ ದಕ್ಷತೆ ಉದಾಹರಣೆಯಾಗಿದೆ.

ಮುಂದೆ ಇಲ್ಲಿ ಅನೇಕ ಕೋರ್ಸ್‌ಗಳನ್ನು ಪ್ರಾರಂಭಿಸಿ ಉತ್ತರ ಕರ್ನಾಟಕಲ್ಲಿ ಹೆಸರು ವಾಸಿಯಾದ ಕಲಾ ಶಾಲೆಯಾಗಿ ಪರಿವರ್ತಿಸಿದರು. ಅಲ್ಲದೆ ಎಂ.ಎಂ.ಕೆ. ಕಲಾ ಕಾಲೇಜನ್ನು ಆರಂಭಸಿ ಪದವಿ ಹಾಗೂ ಸ್ನಾತಕೋತ್ತರ ಕಲಾಶಿಕ್ಷಣ ದೊರೆಯುವಂತೆ ಮಾಡಿದ್ದು ಅಂದಾನಿಯವರ ದೂರದರ್ಶಿತ್ವದ ನಿದರ್ಶನವಾಗಿದ್ದು, ಈ ಎಲ್ಲ ಅಂಶಗಳನ್ನು ಈ ಅಧ್ಯಾಯದಲ್ಲಿ ವಿವೇಚಿಸಲಾಗಿದೆ.

ಅಂದಾನಿಯವರ ಕಲಾ ಬದುಕು ಐಡಿಯಲ್ ಫೈನ್‌ಆರ್ಟ್ಸ್ ಕಲಾಸಂಸ್ಥೆಯೊಂದಿಗೆ ಬೆಸೆದುಕೊಂಡಿದೆ. ಕಲಾ ಸಂಸ್ಥೆಯ ಬೆಳವಣಿಗೆಯು ಪರೋಕ್ಷವಾಗಿ ಅಂದಾನಿಯವರ ಬೆಳವಣಿಗೆಯೇ ಆಗಿದೆ. ಈ ಕಲಾ ಸಂಸ್ಥೆಯನ್ನು ರಾಷ್ಟ್ರಮಟ್ಟದಲ್ಲಿ ಗುರುತಿಸುವಂತೆ ಬೆಳೆಸುವಲ್ಲಿ ಅಂದಾನಿಯವರ ಅವಿರತ ಶ್ರಮವಿದೆ. ಕಲಾಶಿಬಿರ ಪ್ರದರ್ಶನ, ಪ್ರಾತ್ಯಕ್ಷಿಕೆ, ಉಪನ್ಯಾಸ ಹಮ್ಮಿಕೊಳ್ಳುವ ಮೂಲಕ ಅದರ ಅಭಿವೃದ್ಧಿಗೆ ಕಾರಣರಾಗಿದ್ದಾರೆ. ಇದಲ್ಲದೆ ರಾಜ್ಯ, ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಟ್ಟದ ವಿದ್ವಾಂಸರು, ಕಲಾವಿದರನ್ನು ಕಲಾಶಾಲೆಗೆ ಕರೆಸುವ ಮೂಲಕ ವಿದ್ಯಾರ್ಥಿಗಳಿಗೆ ಹೆಚ್ಚಿನ ಜ್ಞಾನವನ್ನು ಒದಗಿಸಿದ್ದಾರೆ. ಇಂತಹ ಕ್ರಮಗಳಿಂದಾಗಿ ಇಲ್ಲಿನ ವಿದ್ಯಾರ್ಥಿಗಳು ರಾಷ್ಟ್ರಮಟ್ಟದಲ್ಲಿ ಗುರುತಿಸಿಕೊಳ್ಳುವಂತಾಗಿದ್ದು ಎಂಬುದನ್ನು ಕಂಡುಕೊಳ್ಳುತ್ತ ಅದಕ್ಕಾಗಿ ಅಂದಾನಿಯವರು ಎಂತಹ ಕ್ರಮಗಳನ್ನು ತೆಗೆದುಕೊಂಡರು ಎಂಬುದನ್ನು ವಿವೇಚಿಸಲಾಗಿದೆ.

ನಾಲ್ಕನೆಯ ಅಧ್ಯಾಯವು ಅಂದಾನಿಯವರ ಕಲಾ ಕೃತಿಗಳ ವಿಂಗಡಣೆ ಮತ್ತು ವಿಶ್ಲೇಷಣೆ ಒಳಗೊಂಡಿದೆ. ಅಂದಾನಿಯವರು ತಮ್ಮ ಬದುಕಿನುದ್ದಕ್ಕೂ ಅನೇಕ ಬಗೆಯ ಕಲಾಕೃತಿಗಳನ್ನು ರಚಿಸುತ್ತಾ

ಬಂದಿದ್ದಾರೆ. ಬಾಲ್ಯದಿಂದ ಇಂದಿನವರೆಗೂ ಅವರ ಕಲಾ ರಚನೆಯ ಪ್ರಕೃತಿಯೇ ನಿರಂತರವಾಗಿ ಸಾಗಿದೆ. ಅವರ ಕಲಾಕೃತಿಗಳು ರಾಜ್ಯ, ರಾಷ್ಟ್ರದ ವಿವಿಧ ಪ್ರದೇಶಗಳಲ್ಲಿ ಮಾತ್ರವಲ್ಲದೆ ವಿದೇಶಗಳಲ್ಲೂ ಸಂಗ್ರಹಗೊಂಡಿವೆ. ಹಾಗಾಗಿ ಅಧ್ಯಯನ ಮತ್ತು ಸಮಯದ ಮಿತಿಯಿಂದಾಗಿ ಲಭ್ಯವಾದ ಕೆಲವು ಕಲಾ ಕೃತಿಗಳನ್ನು ಪ್ರಾತಿನಿಧಿಕವಾಗಿ ಆಯ್ದುಕೊಂಡು ಅಧ್ಯಯನಕ್ಕೊಳಪಡಿಸಿರುವುದು ಈ ಅಧ್ಯಾಯದಲ್ಲಿದೆ. ಇಲ್ಲಿ ಆಯ್ದುಕೊಂಡ ಕಲಾಕೃತಿಗಳನ್ನು ಮಾಧ್ಯಮ ವಿಷಯ ಹಾಗೂ ತಂತ್ರಗಾರಿಕೆಗೆ ಅನುಸಾರವಾಗಿ ವಿಂಗಡಿಸಿಕೊಂಡು ವಿಶ್ಲೇಷಣೆ ಮಾಡಲಾಗಿದೆ. ಇದರಲ್ಲಿ ಕಲಾಕೃತಿಗಳೂ ರೇಖಾವಿನ್ಯಾಸ, ಬಣ್ಣಗಾರಿಕೆ, ಸಂಯೋಜನೆ, ವಸ್ತುವಿಷಯಗಳೊಂದಿಗೆ ಅವುಗಳ ವಿಮರ್ಶೆಯನ್ನು ಮಾಡಲು ಪ್ರಯತ್ನಿಸಲಾಗಿದೆ. ಇಲ್ಲಿ ಚಿತ್ರದ ಬಾಹ್ಯ ವಿವರಣೆಗಳಿಗಿಂತ ಚಿತ್ರದ ಆಂತರಿಕ ಅಭಿವ್ಯಕ್ತಿ, ಅವುಗಳು ಧ್ವನಿಸುವ ವಿಚಾರಗಳಿಗೆ ಹೆಚ್ಚಿನ ಮಹತ್ವ  ಕೊಡಲಾಗಿದೆ.

ಐದನೆಯ ಅಧ್ಯಾಯವು ಅಂದಾನಿಯವರ ಚಿತ್ರಕಲಾ ಶೈಲಿ, ಪ್ರಭಾವ ಮತ್ತು ಪ್ರೇರಣೆಗಳನ್ನು ಕುರಿತಾಗಿದೆ. ಇದರಲ್ಲಿ ಅಂದಾನಿಯವರ ಕಲಾಶೈಲಿ ಕಾಲದಿಂದ ಕಾಲಕ್ಕೆ ಯಾವ ರೀತಿ ಬದಲಾಗುತ್ತಾ ಬಂದಿದೆ ಎಂಬವುದನ್ನು ಕಂಡುಕೊಳ್ಳಲಾಗಿದೆ. ಅಲ್ಲದೆ ತಮ್ಮ ವಿಶಿಷ್ಟ ಕಲಾ ಶೈಲಿಯಿಂದಾಗಿ ಅವರು ಸಮಕಾಲೀನ ಸಂದರ್ಭದಲ್ಲಿ ಒಬ್ಬ ಶ್ರೇಷ್ಟ ಕಲಾವಿದರಾಗಿದ್ದಾರೆ ಎಂಬುದನ್ನು ಕಲಾಕೃತಿಗಳ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ. ಅಂದಾನಿಯವರು ತಮ್ಮ ಕಲಾಬದುಕಿನಲ್ಲಿ ಅನೇಕ ಕಲಾವಿದರಿಂದ ಮತ್ತು ಅವರ ಕೃತಿಗಳಿಂದ ಪ್ರಭಾವಿತರಾಗಿರುವುದನ್ನು ಗುರುತಿಸಲಾಗಿದೆ. ಗ್ರಾಮೀಣ ಜನಪದಕಲೆ, ಪ್ರಾಥಮಿಕ ಶಾಲಾಶಿಕ್ಷಕರು, ಪ್ರೌಢಶಾಲೆಯ ಕಲಾಶಿಕ್ಷಕರು, ಕಲಾಶಾಲೆಯ ಕಲಾಶಿಕ್ಷಕರು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಅಂದಾನಿಯವರ ಮೇಲೆ ಹೇಗೆ ಪರಿಣಾಮ ಬೀರಿದರು ಎಂಬುದನ್ನು ವಿವರಿಸಲಾಗಿದೆ. ಜೊತೆಗೆ ವೈಜ್ಞಾನಿಕ ಬೆಳವಣಿಗೆಗಳು, ನಗರೀಕರಣದ ಪ್ರಭಾವ, ಪಾಶ್ಚಾತ್ಯ ಆಧುನಿಕಕಲೆ ಮತ್ತು ಕಲೆಗಾರರು, ಸಮಕಾಲೀನ ಪ್ರಖ್ಯಾತ ಕಲಾವಿದರು, ಸಾಹಿತಿಗಳು, ಚಿಂತಕರು ಇವರೆಲ್ಲ ಅಂದಾನಿಯವರ ಕಲಾ ಬದುಕಿನಲ್ಲಿ ಯಾವ ಬಗೆಯ ಪ್ರಭಾವ ಬೀರಿದರು ಎಂಬುದನ್ನು ಕಂಡುಕೊಳ್ಳಲಾಗಿದೆ. ಇದಲ್ಲದೆ ಪ್ರಮುಖ ಐತಿಹಾಸಿಕ ಮತ್ತು ನಿಸರ್ಗ, ಸೌಂದರ್ಯಪೂರಿತ ತಾಣಗಳು, ಪ್ರಾಚೀನ ಸ್ಮಾರಕಗಳು, ಶಾಸನಗಳು, ವೀರಗಲ್ಲು, ಮಾಸ್ತಿಕಲ್ಲು, ಕೋಟೆ ಕೊತ್ತಲಗಳೂ ಪ್ರಭಾವ  ಇವರ ಕಲಾ ಜೀವನದಲ್ಲಿ ಯಾವ ರೀತಿ ಉಂಟಾಗಿದೆ ಎಂಬುದನ್ನು ಇಲ್ಲಿ ಹೇಳಲಾಗಿದೆ.

ಯಾವುದೇ ಕಲಾವಿದನ ಕೃತಿರಚನೆಯ ಹಿಂದೆ ಪ್ರೇರಣೆ ಬಹುಮುಖ್ಯ ಪಾತ್ರ ವಹಿಸುತ್ತದೆ. ಅಂದಾನಿಯವರು ಬದುಕಿನುದ್ದಕ್ಕೂ ವಿವಿಧ ರೀತಿಯ ಪ್ರೇರಣೆಗಳಿಗೊಳಗಾಗಿ ಕೃತಿರಚನೆ ಮಾಡಿದ್ದಾರೆ ಎಂಬುದನ್ನು ತಿಳಿದುಕೊಳ್ಳಲಾಗಿದೆ. ಹಳ್ಳಿಯ ಪರಿಸರದಲ್ಲಿ ವಿಶೇಷ ಸಂದರ್ಭಗಳಲ್ಲಿ ರಚಿಸುವ ಜನಪದ ಕಲೆಗಳು, ಹಳ್ಳಿಯ ಮನೆ, ಗುಡಿಸಲು, ಭವ್ಯಮಹಲುಗಳು, ಅವರ ತಂದೆ ತಾಯಿ, ನಿಸರ್ಗ, ಗುಲಬರ್ಗಾ ಪ್ರದೇಶದ ರಣಬಿಸಿಲು, ಈ ಪ್ರದೇಶದ ವಿಶಿಷ್ಟ ವಾಸ್ತುಶಿಲ್ಪ ಇವೆಲ್ಲವುಗಳು ಅಂದಾನಿಯವರಿಗೆ ಕಲಾಕೃತಿ ರಚನೆಗೆ ಪ್ರೇರಣೆಯಾಗಿರುವುದನ್ನು ಕಂಡುಕೊಳ್ಳಲಾಗಿದೆ. ಇಂತಹ ಸಂಗತಿಗಳಲ್ಲದೇ ಮಹಿಳೆಯರ

ಬೊಜ್ಜುದೇಹ, ತಮ್ಮ ಬಾಲ್ಯದ ಆಟ ಮತ್ತು ನೆನಪುಗಳು, ಪ್ರಾಚೀನ ಭಿತ್ತಿಚಿತ್ರಗಳು, ಕೊಬ್ಬಿದ ಗೂಳಿ ಮುಂತಾದವುಗಳು ಇವರ ಕಲಾ ಪ್ರೇರಣೆಯ ಹಿಂದಿರುವ ಶಕ್ತಿಗಳೆಂಬುದನ್ನು ವಿವೇಚಿಸಲಾಗಿದೆ.

ಆರನೆಯ ಅಧ್ಯಾಯವು ಅಂದಾನಿವರ ಕಲಾ ಚಟುವಟಿಕೆಗಳು ಮತ್ತು ಸಾಹಿತ್ಯಗಳ ಕುರಿತಾಗಿದೆ. ಅಂದಾನಿಯವರು ಸೃಜನಶೀಲ ಮನೋಭಾವದ ಕ್ರಿಯಾಶೀಲ ವ್ಯಕ್ತಿಯಾಗಿದ್ದು ನಿರಂತರ ಕಲಾ ಚಟುವಟಿಕೆಗಳಲ್ಲಿ ತೊಡಗಿಕೊಂಡಿರುತ್ತಾರೆ. ಕಲಾ ಸಂಸ್ಥೆಯನ್ನು ಬೆಳೆಸುವ ಹಿನ್ನಲೆಯಲ್ಲಿ ಹಲಾವಾರು ಚಟುವಟಿಕೆಗಳನ್ನು ನಡಿಸುತ್ತಾ ಬಂದಿದ್ದಾರೆ. ಅವುಗಳಲ್ಲಿ ಕಲಾ ಶಿಬಿರ, ಕಾರ್ಯಗಾರ ಕಲಾಪ್ರದರ್ಶನ, ಪ್ರಾತ್ಯಕ್ಷಿಕೆ, ಉಪನ್ಯಾಸ, ಚರ್ಚೆ ಮುಂತಾದವುಗಳಲ್ಲಿ ತೊಡಗಿಸಿ ಕೊಳ್ಳುತ್ತಾ ಬಂದಿದ್ದಾರೆ. ಇವರ ಕಲಾ ಸಾಧನೆ, ಸೃಜನ ಶೀಲ ಮನೋಭಾವ, ಕೃಯಾ ಶಿಲತೆಯನ್ನು ಪರಿಗಣಿಸಿ ಹಲವಾರು ರಾಜ್ಯ, ರಾಷ್ಟ್ರ ಮಟ್ಟದ ಗೌರವಗಳು ಇವರನ್ನು ಅರಸಿಕೊಂಡು ಬಂದಿವೆ. ಗುಲಬರ್ಗಾ ವಿ.ವಿ.ಯ ಗೌರವ ಡಾಕ್ಟರೇಟ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ವೆಂಕಟಪ್ಪ ಪ್ರಶಸ್ತಿ, ಕ.ಲ.ಕ.ಅ. ಪ್ರಶಸ್ತಿ, ಕೇಂದ್ರ ಲಲಿತಕಲಾ ಅಕಾಡೆಮಿಯ ಪ್ರಶಸ್ತಿ ಹೀಗೆ ಹತ್ತು ಹಲವು ಪ್ರಶಸ್ತಿ ಗೌರವಗಳು ಇವರಿಗೆ ಸಂದಿವೆ. ಇಂತಹ ಎಲ್ಲ ಅಂಶಗಳನ್ನು ಇಲ್ಲಿ ಕಂಡುಕೊಳ್ಳುವುದರ ಜೊತೆಗೆ ಅಂದಾನಿಯವರು ಕಲಾ ಸಾಹಿತ್ಯವನ್ನು ಸಾಂದರ್ಭಿಕವಾಗಿ ರಚಿಸಿದ್ದಾರೆ. ಕಲೆಯ ಕುರಿತಾದ ಪರಿಚಯ ಲೇಖನಗಳು, ವಿಮರ್ಶೆ, ಚರ್ಚೆ ಮತ್ತು ಕಲಾ ಶೈಲಿಗಳ ಬಗೆಗಿನ ಬರಹಗಳು ಇವರಿಂದ ಆಗಾಗ ಬಂದಿವೆ. ಇವುಗಳಲ್ಲದೇ ಅಂದಾನಿಯವರು ಕಲೆ, ಕಲಾ ಬದುಕು, ವ್ಯಕ್ತಿಗಳ ಕುರಿತಾಗಿ ಅನೇಕ ರು ಸಾಹಿತ್ಯ ಮತ್ತು ಅಂದಾನಿಯವರ ಬಗ್ಗೆ ಬಂದ ಸಾಹಿತ್ಯ ಎಂಬುದಾಗಿ ಎರಡು ನೆಲೆಗಳಲ್ಲಿ ಅವರ ಸಾಹಿತ್ಯವನ್ನು ವಿವೇಚನೆಯನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

೧) ಹಿಂದುಳಿದ ಪ್ರದೇಶವೆಂದು ಗುರುತಿಸಲ್ಪಟ್ಟ ಗುಲಬರ್ಗಾ ಕಲಾದೃಷ್ಟಿಯಿಂದ ಹೆಚ್ಚು ಅಭಿವೃದ್ಧಿ ಹೊಂದಿ ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಮಹತ್ವದ ಸ್ಥಾನ ಪಡೆದುಕೊಳ್ಳುವಲ್ಲಿ ವ್ಹಿ.ಜಿ.ಅಂದಾನಿಯವರ ಪಾತ್ರ ಬಹುಮುಖ್ಯ ಎಂಬುದನ್ನು ಕಂಡುಕೊಳ್ಳಲಾಗಿದೆ.

೨) ಭಾರತದ ಕಲಾ ಕ್ಷೇತ್ರದಲ್ಲಿ ಶಾಂತಿನಿಕೇತನ ಮಾದರಿ, ಬರೋಡಾ ಮಾದರಿ, ಮುಂಬೈ ಮಾದರಿ, ಚೆನ್ನೈ ಮಾದರಿಗಳಿದ್ದಂತೆ ಕರ್ನಾಟಕದಲ್ಲಿ ಗುಲಬರ್ಗಾ ಮಾದರಿ ಎಂಬುದನ್ನು ಅಂದಾನಿಯವರು ತಮ್ಮ ಪ್ರಯತ್ನಗಳ ಮೂಲಕ ಹುಟ್ಟು ಹಾಕಿದರು ಎಂಬುದನ್ನು ಪ್ರಥಮ ಬಾರಿಗೆ ಈ ಅಧ್ಯಯನದಲ್ಲಿ ಕಂಡು ಕೊಳ್ಳಲಾಗಿದೆ.

೩) ಐಡಿಯಲ್ ಫೈನ್‌ಆರ್ಟ್ಸ್ ಕಲಾಶಾಲೆಯನ್ನು ರಾಷ್ಟ್ರ ಮಟ್ಟದಲ್ಲಿ ಬೆಳೆಸಿದ್ದು ಮಾತ್ರವಲ್ಲದೆ ಎಂ.ಎಂ.ಕೆ. ಲಲಿತಕಲಾ ಮಹಾವಿದ್ಯಾಲಯವನ್ನು ಸ್ಥಾಪಿಸಿ ಈ ಭಾಗದ ವಿದ್ಯಾರ್ಥಿಗಳ ಉನ್ನತ ಕಲಾ ಶಿಕ್ಷಣದ ಕನಸನ್ನು ನನಸುಮಾಡಿದ ಕೀರ್ತಿ ಅಂದಾನಿಯವರಿಗೆ ಸಲ್ಲುತ್ತದೆ ಎಂಬುದನ್ನು ಇಲ್ಲಿ ಗಮನಿಸಲಾಗಿದೆ.

೪) ಭಾರತದ ಮತ್ತು ಕರ್ನಾಟಕದ ಸಮಕಾಲೀನ ಕಲಾವಿದರಲ್ಲಿ ಗುಲಬರ್ಗಾ ಕಲಾವಿದರ ಪಾತ್ರವನ್ನು ಅಲ್ಲಗಳೆಯುವಂತಿಲ್ಲ. ಇದರ ಹಿಂದೆ ಅಂದಾನಿಯವರ ನಿರಂತರ ಪ್ರಯತ್ನವಿದೆ ಎಂಬುದು ಗಮನಾರ್ಹ. ವಿದ್ಯಾರ್ಥಿಗಳ ಏಳಿಗೆ ಅವರ ಭವಿಷ್ಯ ಅವರಿಗೆ ಮಹತ್ವದ ಸ್ಥಾನ ಕಲ್ಪಿಸುವ ಮುಲಕ ವಿದ್ಯಾರ್ಥಿಗಳ ಬೆಳವಣಿಗೆಯಲ್ಲಿಯೇ ತಮ್ಮ ಅಭಿವೃದ್ಧಿಯನ್ನು ಕಂಡವರು ಎಂಬುದನ್ನು ಕಂಡುಕೊಳ್ಳಲಾಗಿದೆ.

೫) ತಮ್ಮ ಸಂಪೂರ್ಣ ಬದುಕನ್ನೇ ಕಲಾ ಕ್ಷೇತ್ರಕ್ಕೆ ಮೀಸಲಾಗಿಟ್ಟ ಅಂದಾನಿಯವರು ಕಲೆಯ ಬೆಳವಣಿಗೆಯಲ್ಲಿ ಆನಂದ ಕಂಡವರು. ಕೃತಿರಚನೆಯಲ್ಲಿ ತಮ್ಮ ವಿಶಿಷ್ಟ ಶೈಲಿಯಿಂದಾಗಿ ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಗುರುತಿಸಿಕೊಂಡವರು ಎಂಬಂತಹ ಸಂಗತಿಗಳನ್ನು ಇಲ್ಲಿ ವಿವೇಚಿಸಲಾಗಿದೆ.

೬) ಅಂದಾನಿಯವರು ಆಧುನಿಕ ಮನೋಭಾವನೆಯನ್ನು ಹೊಂದಿದವರಾದರೂ ಎಂದಿಗೂ ಪರಂಪರೆ, ಸಂಪ್ರದಾಯಗಳನ್ನು ಕಡೆಗಣಿಸಿದವರಲ್ಲ. ತಮ್ಮ ಕೃತಿಗಳಲ್ಲೂ ಅವರು ಮೂಲ ತತ್ವಗಳನ್ನು ಉಳಿಸಿಕೊಂಡೇ ಅವುಗಳಿಗೆ ಆಧುನಿಕ ರೂಪಕೊಟ್ಟವರು ಎಂದು ಈ ಅಧ್ಯಯನದಿಂದ ತಿಳಿದುಬರುತ್ತದೆ.

೭) ರಾಜ್ಯ, ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಕಲಾವಿದರ ಕೃತಿರಚನೆಗಳಿಂದ ಅಂದಾನಿಯವರು ಪ್ರಭಾವಿತಗೊಂಡರು. ತಮ್ಮ ಪ್ರದೇಶದ ವಿಶೇಷ ಶೈಲಿ ಕಂಡುಕೊಂಡವರು. ಪ್ರಾಚೀನ ಸ್ಮಾರಕಗಳು, ಶಾಸನಗಳು, ದಪ್ಪ ಮಹಿಳೆಯರು, ಗೂಳಿಚಿತ್ರಗಳು, ನನ್ನ ಬಾಲ್ಯಸರಣಿ ಚಿತ್ರಗಳು, ನೆರಳು ಬಿಸಿಲಿನ ಚರ್ಚೆ ಸರಣಿ ಚಿತ್ರಗಳಲ್ಲಿ ಅವರ ಶೈಲಿಯು ಅನಾವರಣಗೊಂಡಿರುವುದನ್ನು ಗುರುತಿಸಲಾಗಿದೆ.

೮) ಚಿತ್ರರಚನೆಯಲ್ಲಿ ರೇಖಾಚಿತ್ರವನ್ನು ಹೆಚ್ಚು ಇಷ್ಟಪಡುವ ಅಂದಾನಿಯವರು ತಮ್ಮ ಉಳಿದ ಕೃತಿಗಳಲ್ಲೂ ರೇಖೆಯ ಪ್ರಾಧಾನ್ಯತೆಯನ್ನು ಕಾಯ್ದುಕೊಂಡಿದ್ದಾರೆ. ಜೊತೆಗೆ ವರ್ಣಲೇಪನದಲ್ಲಿಯೂ ಅವರ ವೈಯಕ್ತಿಕ ಅಭಿವ್ಯಕ್ತಿಯ ವಿಶೇಷತೆಯನ್ನು ಕಲಾಕೃತಿಗಳಲ್ಲಿ ಗುರುತಿಸುವ ಪ್ರಯತ್ನವನ್ನು ಈ ಅಧ್ಯಯನದ ಮೂಲಕ ಮಾಡಲಾಗಿದೆ.

೯) ವಿದ್ಯಾರ್ಥಿಗಳ ನೆಚ್ಚಿನ ಕಲಾಗುರುಗಳಾಗಿ, ಮಾರ್ಗದರ್ಶಕರಾಗಿ, ದಕ್ಷ ಆಡಳಿತಗಾರರಾಗಿ ಸಂಘಟನಾ ಶಕ್ತಿ ಹೊಂದಿದವರಾಗಿ, ಸಮಕಾಲೀನ ಕಲಾಕ್ಷೇತ್ರದ ಶ್ರೇಷ್ಠ ಕಲಾವಿದ ಮತ್ತು ಚಿಂತಕರಾಗಿ ಅಂದಾನಿಯವರು ನಮ್ಮೊಂದಿಗಿರುವುದು ಅವರ ನಿರಂತರ ಪರಿಶ್ರಮ, ಕ್ರಿಯಾಶೀಲತೆ ಮತ್ತು ವ್ಯಕ್ತಿತ್ವಗಳಿಂದಾಗಿ ಎಂಬುದನ್ನು ಇಲ್ಲಿ ವಿವೇಚಿಸಲಾಗಿದೆ.

೧೦) ಕಲಾವಿದರ ಕುರಿತಾಗಿರುವ ವ್ಯಕ್ತಿ ಅಧ್ಯಯನಗಳಲ್ಲಿ ಅವರ ವೈಯಕ್ತಿಕ ಬದುಕಿನ ವಿವರಗಳನ್ನು ಗೌಣವಾಗಿಸಿ ಅವರ ಕಲೆ, ಕಲಾಕೃತಿ, ಕಲಾಶೈಲಿ, ಪೂರಕ ಚಟುವಟಿಕೆಗಳಂತಹ ಅಂಶಗಳಿಗೆ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡಿ ಅಧ್ಯಯನ ಮಾಡಿರುವ ಪ್ರಯತ್ನ ಇಲ್ಲಿದೆ.

ನಾಡಿನ ಶ್ರೇಷ್ಠ ಕಲಾವಿದರು, ಕಲಾಚಿಂತಕರಲ್ಲಿ ಒಬ್ಬರಾದ ವ್ಹಿ.ಜಿ.ಅಂದಾನಿಯವರ ಕಲೆ ಮತ್ತು ಬದುಕು ಕುರಿತಾಗಿರುವ ಈ ಅಧ್ಯಯನ ಪ್ರಬಂಧವು ಕಾಲ ಮತ್ತು ವಿಷಯದ ವ್ಯಾಪ್ತಿಗೆ ಒಳಪಟ್ಟು ರಚನೆಯಾಗಿರುವುದರಿಂದ ಕೆಲವು ಇತಿ ಮಿತಿಗಳಿಗೆ ಒಳಪಟ್ಟಿದೆ. ಹಾಗಾಗಿ ಆಂದಾನಿಯವರ ಕಲೆ ಮತ್ತು ಬದುಕು ಕುರಿತಾಗಿ ಇದು ಸಮಗ್ರವಾದ ಅಧ್ಯಯನವಲ್ಲ, ಕೆಲವು ದೃಷ್ಟಿಕೋನಗಳಿಂದ ಮಾತ್ರ ಈ ಅಧ್ಯಯನವನ್ನು ನಡೆಸಲಾಗಿದ್ದು, ಇನ್ನೂ ಹಲವಾರು ದೃಷ್ಟಿಕೋನಗಳಿಂದ ಅಧ್ಯಯನ ಮಾಡುವ ಅವಕಾಶಗಳು ಇಲ್ಲಿವೆ. ಈ ಹಿನ್ನೆಲೆಯಿಂದ ಮುಂದಿನ ಅಧ್ಯಯನಕಾರರಿಗೆ ಇದೊಂದು ಮಾರ್ಗಸೂಚಿಯಾದರೆ ಅದರ ಸಾರ್ಥಕತೆ ಯಶಸ್ವಿಯಾದಂತೆ ಎಂದು ಇಲ್ಲಿ ಹೇಳಬಯಸುತ್ತೇನೆ.



## ಅನುಬಂಧಗಳು

೧. ಗ್ರಂಥಋಣ

೨. ಕಲಾವಿದರ ಬಗ್ಗೆ ಗಣ್ಯರ ನುಡಿಗಳು

೩. ರಷ್ಯಾ ನನ್ನ ಮನದಿಂದ

೪. ವಂಶಾವಳಿ

೫. ಪತ್ರಗಳು

೬. ಛಾಯಾಚಿತ್ರಗಳು

# ೧. ಗ್ರಂಥ ಋಣ


೧). ಕಲಾವಿದ ಅಂದಾನಿ ಐವತ್ತು (ಸಂ)ಚಂದ್ರಹಾಸ.ವ್ಹಾಯ್. ಜಾಲಿಹಾಳ ಅಂದಾನಿ ಗೆಳೆಯರ ಬಳಗ, ದಿ ಐಡಿಯಲ್ ಫೈನ್ ಆರ್ಟ ಸೊಸಾಯಟಿ ಕಾರ್ಪೊರೇಶನ್ ಗಾರ್ಡನ, ಗುಲಬರ್ಗಾ ೧೯೯೭

೨) ಕಟ್ಟಂಗೇರಿ ಕೃಷ್ಣ ಹೆಬ್ಬಾರ, ಕು.ಶಿ.ಹರಿದಾಸ ಭಟ್ಟ (ಕಲೆ ಮತ್ತು ಬದುಕು) ಪ್ರಾದೇಶಿಕ ಜಾನಪದ ರಂಗಕಲೆಗಳ ಅಧ್ಯಯನ ಕೇಂದ್ರ, ಉಡುಪಿ, ೧೯೯೮

೩) ಕಲಾವಿದ ಆರ್.ಎಂ. ಹಡಪದ ಒಂದು ಅಧ್ಯಯನ, ಡಾ. ಸಿದ್ದಲಿಂಗಸ್ವಾಮಿ. ಆ. ಹಿರೇಮಠ ಪಿ.ಎಚ್. ಡಿ. ಸಂಶೋಧನಾ ಮಹಾಪ್ರಬಂಧ, ಕ.ವಿ.ವಿ.ಹಂಪಿ-೨೦೦೩

೪) ಕಲಾಕೋಶ (ಸಂ)ಎನ್. ಮರಿಶಾಮಾಚಾರ್, ಕರ್ನಾಟಕ ಲಲಿತಕಲಾ ಅಕಾಡೆಮಿ; ಬೆಂಗಳೂರು-೨೦೦೮

೫) ಗುಲಬರ್ಗಾ ಜಿಲ್ಲೆ ಭಾರತದ ಗ್ಯಾಸೆತಿಯರ್,ಮೆ॥ ಗೀತಾಂಜಲಿ ಪ್ರಿಂಟರ್ಸ, ನಂ.೪.ಎಂ.ಎಸ್. ರಾಮಯ್ಯ ಕೈಗಾರಿಕಾ ಬಡಾವಣೆ ಮತ್ತಿಕೆರೆ, ಬೆಂಗಳೂರು-೧೯೯೭

೬) ಚಿತ್ರಕಲಾವಿದ ಜೆ. ಎಸ್. ಖಂಡೇರಾವ್ ಮಲ್ಲಿಕಾರ್ಜುನ. ಬಾಗೋಡಿ ಒಂದು ಅಧ್ಯಯನ, ಎಂ. ಫಿಲ್. ಸಂಶೋಧನಾ ಕಿರೂ ಪ್ರಬಂಧ, ಕ. ವಿ. ವಿ. ಹಂಪಿ, ೨೦೦೩

೭) ಚಿತ್ರಕಲಾವಿದ ಡಿ.ವಿ. ಹಾಲಭಾವಿಯವರ ಶಂಕರಪ್ಪ. ಎಂ. ಕುಂದಗೋಳ ಎಂ.ಫಿಲ್. ಸಂಶೋಧನಾ ಕಿರೂ ಪ್ರಬಂಧ ಕ. ವಿ. ವಿ. ಹಂಪಿ

೮) ಚಿತ್ರಚಿತ್ತ ಚಿ.ಸು. ಕೃಷ್ಣಸೆಟ್ಟಿ, ಇಳಾ ಪ್ರಕಾಶನ, ಬೆಂಗಳೂರು-೨೦೦೦

೯) ದೃಶ್ಯ ಕಲಾ ಪ್ರಶಸ್ತಿ ಪುರಸ್ಕೃತರು (ಸಂ)ಡಾ.ವ್ಹಿ.ಜಿ. ಅಂದಾನಿ, ಡಾ.ಡಿ.ಬಿ.ನಾಯಕ, ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ-೨೦೧೦

೧೦) ದೃಷ್ಟಿ-ಸೃಷ್ಟಿ, ಡಾ.ಶಿವಾನಂದ.ಎಚ್. ಬಂಟನೂರ, ಅಲಕಾ ಪ್ರಕಾಶನ ಬಿಜಾಪುರ, ೨೦೦೯

೧೧) ದೃಶ್ಯ ಪದೃಶ್ಯ, ಡಾ.ಶಿವಾನಂದ.ಎಚ್. ಬಂಟನೂರ, ಅಲಕಾ ಪ್ರಕಾಶನ ಖೈನೂರ, ೨೦೧೩

೧೨) ಬಯಲು ಬಯಲಾದ ರೇಖೆಗಳು, ಸಂ.ವ್ಹಿ.ಜಿ. ಅಂದಾನಿ ನೀಲಾಂಗಳ ಪಬ್ಲಿಕೇಶನ,

೧೩) ಮಾಟದೊಳಗನ ನೋಟ, ಡಾ.ಶಿವಾನಂದ.ಎಚ್. ಬಂಟನೂರ, ಯಾಜಿ ಪ್ರಕಾಶನ ಭೂಮಿ, ಎಮ್.ಪಿ.ಪ್ರಕಾಶನಗರ, ಹೊಸಪೇಟೆ-೨೦೧೨

೧೪) ರುಮಾಲೆ ಚನ್ನಬಸವಯ್ಯ, ಕೆ.ಎಸ್. ಶ್ರೀನಿವಾಸ ಮೂರ್ತಿ, ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು-೧೯೯೦

೧೫) ರೇಖಾ ಚಿತ್ರ ಕಲೆಯ ತಾಯಿ ಊರ್ಮಿಳಾ-ಪ್ರಕಾಶನ, ಅಬ್ಬಿಗೇರಿ,ತಾ.ರೋಣ. ಜಿ.ಗದಗ

೧೬) ರೇಖಾ ಚಿತ್ರ , ಬಿ.ವಿ.ಕೆ.ಶಾಸ್ತ್ರಿ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೧

೧೭) ವ್ಹಿ.ಜಿ. ಅಂದಾನಿ, ಡಾ.ಶಿವಾನಂದ.ಎಚ್. ಬಂಟನೂರ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೨೦೦೪

# ೨. ಕಲಾವಿದರ ಬಗ್ಗೆ ಗಣ್ಯರ ನುಡಿಗಳು

I had the pleasure of visiting this instuion, which I struggling to create and establish its identiy. Luck of space and equipment is the great handicap for its growth. The all enthusiast principal, I hope will get all possible encouragement from the public and government a like. The result of the institution is praise worthy and I wish future success to its development.

28-02-1977
K.K. Hebbar

I was exstremely happy to see the painting of Sri. AndAni. It is heartening to noie that such an young man has achived so much. I am sure Sri. Andani ements he richly deserve.

I amimpressed by prof. V.G Andani's Exhibition His works are realistic and attractive. All his artifacts froms god to spiritual philosophy are emotionally effective and undoubtedliy Mr. andani has got a very very bright future.

10-01-1975
**Shri. B.K Mahagonkar**

I'm deeply impressed by what I have seen and heard at this art centre. I expect great things to happen under the inspiring leadership of shri. Andani more power to his efforts.

**Dr.A.S.Raman,**
**madras.**

If there are more people who are like shri. Andani. The future of Art & Art teaching in india will be very bright. This school s a kind of very promising 'One mam show' I am sure when the new building comes-up this will be one of the best art schools in our Country.

23rd Jan 1988.

**Shri Jyoti Bhatt, Faculty of Fine Arts, M.S.University,**
**Vadodara.**

Mr. Andani and his collagues are struggling hard to develop fine Art in Gulbarga Division. I appreciate their efforts and feel that they deserve all encouragement.

10-05-1990

**Shri. Veerendra Patil, Chief Minister, Govt. of Karnataka.**

ಶ್ರೀ ಅಂದಾನಿಯವರ ದೂರದೃಷ್ಟಿಯ ಫಲವಾಗಿ ಗುಲಬರ್ಗಾ ಇತಿಹಾಸ ಪಟ್ಟಣದಲ್ಲಿ ಕಲೆಯ ಶಿಕ್ಷಣ ವಿಶ್ವವಿದ್ಯಾಲಯ ಮಟ್ಟವನ್ನು ತಲುಪಿದೆ. ಸ್ನಾತಕೋತ್ತರ ಪದವಿ ತರಗತಿಗಳು ಪ್ರಾರಂಭವಾಗಿವೆ, ಈ ಕಲಾಪದವಿ ಶಿಕ್ಷಣ ಭಾವಿ ಕಲಾ ವಿದ್ಯಾರ್ಥಿಗಳಿಗೆ ಸ್ಫೂರ್ತಿ ದೊರಕುವ ತಾಣವಾಗಲಿ. ಈ ಸಂಸ್ಥೆ ನಿರಂತರವಾಗಿ ಬೆಳೆಯಲಿ, ಯಶಸ್ಸು ಸಿಗಲಿ.

**ಶ್ರೀ ಎಂ.ಎಸ್. ನಂಜುಂಡರಾವ್**
**ಕರ್ನಾಟಕ ಚಿತ್ರಕಲಾ ಪರಿಷತ್,**
**ಬೆಂಗಳೂರು.**

ಈ ಸಂಸ್ಥೆಯ ದೈಹಿಕ ಹಾಗೂ ಬೌದ್ಧಿಕ ಬೆಳವಣಿಗೆಯನ್ನು ನಾನು ಸುಮಾರು ಒಂಬತ್ತು ವರ್ಷಗಳಿಂದ ನೋಡುತ್ತಾ ಬಂದಿರುವೆ. ಶ್ರೀ ಅಂದಾನಿಯವರ ಕರ್ಮಯೋಗಿಗಳ ಧುರೀಣತ್ವದಲ್ಲಿ ನಡೆದ ಈ ಚಿತ್ರಕ್ರಾಂತಿಗೆ ಶುಭವಾಗಲಿ.

**ಶ್ರೀ ವಿಜಯ ಸಾಸನೂರ**
**ಪ್ರಶಾಸನ ನಿರ್ದೇಶಕ ಫಿಲ್ಮ ಡಿವಿಜನ್,**
**ಮುಂಬಯಿ.**

ಕಲಾಪ್ರಪಂಚಕ್ಕೆ ಅತ್ಯುತ್ತಮ ಕೊಡುಗೆಗಳನ್ನು ನೀಡುತ್ತಾ ಬಂದಿರುವ ಕಲಾ ನಿಕೇತನವನ್ನು ಅದರ ಚಟುವಟಿಕೆಗಳನ್ನು ನೋಡಿ ಬಹಳ ಸಂತೋಷವಾಯಿತು. ಶ್ರೀ ಅಂದಾನಿಯವರು ನಿಸ್ಪ್ರಹರಾಗಿ ಕಲಾ ಸೇವೆ ಮಾಡುತ್ತಿದ್ದಾರೆ. ಕಲಾನಿಕೇತನಕ್ಕೆ ಅಂದಾನಿಯವರಿಗೆ ಉಜ್ವಲ ಭವಿಷ್ಯವನ್ನು ಹಾರೈಸುವೆ.

**ಶ್ರೀ ಜಿ.ವೈ. ಹಬ್ಬಿಕರ್,**
**ಬೆಂಗಳೂರು.**

ಹೈದರಾಬಾದ್ ಕರ್ನಾಟಕ ಏರಿಯಾದಲ್ಲಿ ತನ್ನದೇ ಆದ ಸಂಸ್ಕೃತಿ ಕಲಾ ಪ್ರಕಾರಗಳಿವೆ. ಅದು ಇಡೀ ಕರ್ನಾಟಕದ ಸಂಪತ್ತನ್ನು ಹೆಚ್ಚಿಸಲಿದೆ. ಇಂದಿನ ಸಾಂಸ್ಕೃತಿಕ ಸರ್ವಾಂಗೀಣ ಬೆಳವಣಿಗೆಯಲ್ಲಿ ಐಡಿಯಲ ಫೈನ್ ಆರ್ಟ ಇನ್ಸ್‌ಟಿಟ್ಯೂಟ್‌ನ ಸಂಸ್ಥೆ ಪ್ರಮುಖ ಪಾತ್ರ ವಹಿಸುತ್ತದೆ. ಹಾಗೂ ಈ ಭಾಗದ ಸಾಂಸ್ಕೃತಿಕ ಕೇಂದ್ರವಾಗಿದೆ. ಸಂಸ್ಥೆಯ ಕೇಂದ್ರ ನಾಡಿಯಲ್ಲಿ ಶ್ರೀ ವ್ಹಿ.ಜಿ. ಅಂದಾನಿಯವರು ಹಾಗೂ ಅಧ್ಯಕ್ಷರು ಹೆಚ್ಚು ಆಸಕ್ತಿ ಹಾಗು ಪರಿಶ್ರಮ ಇದಕ್ಕೆ ಕಾರಣವಾಗಿದೆ. ಹಾಗೂ ಇಲ್ಲಿನ ಸುಸಂಸ್ಕೃತಿಕ ನಾಗರೀಕರು ಇದರ ಉತ್ತರೋತ್ತರ ಅಭಿವೃದ್ಧಿಗೆ ಕಾರಣವಾಗುತ್ತಾ ನಾಡಿನ ಈ ಭಾಗದ ಸಂಸ್ಕೃತಿ ಸಂಪತ್ತನ್ನು ಉಳಿಸಿ ಬೆಳೆಸುವ ಈ ಸಂಸ್ಥೆಗೆ ತನು-ಮನ ಧನದಿಂದ ಸಹಾಯ ಮಾಡುವುದು ಅತೀ ಮುಖ್ಯವಾಗಿದೆ.

**ಶ್ರೀಆರ್.ಎಂ.ಹಡಪದ, ಮಾಜಿ ಅಧ್ಯಕ್ಷರು, ಕರ್ನಾಟಕ ಲಲಿತ ಕಲಾ ಅಕಾಡೆಮಿ**

ಕಲಬುರ್ಗಿ ನಗರದಲ್ಲಿ ಕಲಾಭಿರುಚಿಯನ್ನು ಜೀವಂತವಾಗಿಡಲು ಇಂಥ ಚಿತ್ರಕಲಾ ಪ್ರದರ್ಶನಗಳು ಆಗಾಗ ನಡೆಯಬೇಕು. ಈ ದಿಸೆಯಲ್ಲಿ ಶ್ರೀ ಅಂದಾನಿಯವರ 18 ಚಿತ್ರಗಳ ಈ ಪ್ರದರ್ಶನ ತುಂಬಾ ಉಪಯುಕ್ತವಾಗಿದೆ. ಪ್ರದರ್ಶನದಲ್ಲಿ ನನಗೆ ತುಂಬಾ ಹಿಡಿಸಿದ ಚಿತ್ರ ಗಣಪತಿ. ಇದರ ವರ್ಣ ಸಂಯೋಜನೆ ಮನೋಜ್ಞವಾಗಿದೆ. ಅಂದಾನಿಯವರ ಇನ್ನೂ ಉತ್ತಮ ಕೃತಿಗಳು ಬರುತ್ತವೆಂದು ನಾನು ನಂಬಿದ್ದೇನೆ.

**ಡಾ.ಗಿರಡ್ಡಿ ಗೋವಿಂದರಾಜ**

# "ರಶಿಯಾ ನನ್ನ ಮನ" ದಿಂದ

೧೯೭೨ರಲ್ಲಿ ಡಾ॥ ರಾಜಶೇಖರಯ್ಯನವರ ಭಾಷಣ ಕೇಳಿದನಂತರ ಹದಿನೈದು ವರ್ಷದಿಂದ ರಶಿಯಾದ ಬಗೆಗ ಸುಂದರ ಅಭಿಪ್ರಾಯ ಇದೇ ಇತ್ತು- ಮಧ್ಯದಲ್ಲಿ ಎರಡು ಸಲ ರಶಿಯಾಕ್ಕೆ ಹೋಗುವ ಅವಕಾಶ ಕಳೆದುಕೊಂಡ ತೊಂದರೆಯು ಕಾಡುತ್ತಿತ್ತು. ಈ ಎಲ್ಲ ಕೆಲಸ ಅವಕಾಶ ಕಷ್ಟದ ಮಧ್ಯೆ ೧೯೮೭ ಈ ಸಲ ಹೋಗಲು ನಿರ್ಧರಿಸಿದೆ. ಅವಕಾಶಕ್ಕೆ ತಕ್ಕಂತೆ ಗೆಳೆಯರ ಗುಂಪಿನೊಂದಿಗೆ ದಿನಾಂಕ ೩೦ನೇ ನವೆಂಬರಕ್ಕೆ ಮುಂಜಾನೆ ೭ ಗಂಟೆಗೆ ದಿಲ್ಲಿ ನಿಲ್ದಾಣದಿಂದ ತಾಸ್ಕೆಂಟಕ್ಕೆ ಹೊರಟೆವು. ಒಂದು ತಾಸು ಕರಾಚಿಯಲ್ಲಿತಡೆದು ಊಟ ಮುಗಿಸಿ, ಸುಮಾರು ೫೦೦೦ಮೈಲಿನ ಪ್ರಯಾಣ ಮಾಡಿದೆವು. ತಾಸ್ಕೆಂಟ ಮುಟ್ಟಿದ್ದು ರಾತ್ರಿ ೯ ಗಂಟೆಗೆ. ಪಾಸ್ ಪೋರ್ಟಗಳ ಮೇಲೊಂದು ಮದ್ರೆ ಗುದ್ದಿಸಿಕೊಂಡು ಹೊರ ಬಂದು ಬಸ್‌ದಿಂದ ಉಜಬಿಕಿಸ್ತಾನ ಹೋಟಲಿನಲ್ಲಿ ಬಂದಿಳಿದೆವು, ಸುಂದರ ವರ್ಣಗಳಿಂದ ತುಂಬಿದ ಲೈಟಗಳು ನಮ್ಮನ್ನು ಸ್ವಾಗತಿಸಿದವು- ಮರುದಿನ ಬಸ್ಸಿನಲ್ಲಿ ತಿರುಗಾಡುತ್ತ ನಗರದ ಪ್ರಮುಖ ರಸ್ತೆಗಳನ್ನು ದಾಟುತ್ತ ಅಲ್ಲಲ್ಲಿ ತಡೆಯುತ್ತಾ ೭೦ನೇ ಅಕ್ಟೋಬರ್ ಕ್ರಾಂತಿದಿನದ ತಯಾರಿ ನೋಡುತ್ತ ಹೋದಂತೆ ೩೦,ಎತ್ತರದ ಲೆನಿನ ಶಿಲ್ಪ ಕೊಡಿಸುವ ಕಾರ್ಯ ನೋಡಿ, ಒಂದು ರೀತಿಯ ದಿಗ್ಭ್ರಮೆ. ಅವರು ಕಟ್ಟಿಕೊಡ್ರಿಸುವ ರೀತಿ, ಸುಂದರ ವಿಗ್ರಹದ ಶೈಲಿ ಬೃಹದಾರಕಾರದ ಶಿಲ್ಪವನ್ನು ಕೊಡಿಸಿರುವ ಸ್ಥಳ ಸುಂದರವಾದ ವಿಶಾಲವಾದ ಸ್ಥಳ ಇಂಥ ಶಿಸ್ತಿನ ಕೆಲಸ ನಮ್ಮಲ್ಲಿ ಏಕೆ ನಡೆಯವುದಿಲ್ಲ. ಪ್ರಶ್ನೆಗಳು ಇಲ್ಲಿಂದಲೇ ಹುಟ್ಟಲು ಪ್ರಾರಂಭವಾದವು. ಇದೇ ರೀತಿ ಇನ್ನೋಂದು ಸುಂದರ ವಿಗ್ರಹ ೧೯೬೬ರಲ್ಲಿ ಆದ ಭಯಂಕರ ಭೂಕಂಪದ ನೆನಪಿಗಾಗಿ ನಿಲ್ಲಿಸಿದ ಶಿಲ್ಪ ಬೃಹದಾಕಾರದ ಈ ಶಿಲ್ಲ ಕರಿಕಲ್ಲಿನಲ್ಲಿ ಕೆತ್ತಲ್ಪಟ್ಟಿದ್ದು ಅಷೇ ಸುಂದರವಾಗಿ ಸ್ತಬ್ಧವಾಗಿ ಸುಂದರ ವಿಶಾಲವಾದ ಆವರಣದಲ್ಲಿ ನಾಲ್ಕು ಮುಖ್ಯ ಹಾದಿಗಳ ಒಂದು ಕಡೆ ನಿಲ್ಲಿಸಲಾಗಿದೆ. ಈ ವಿಗ್ರಹ ಎಂದಿಗೂ ಮರೆಯುವಂತಿಲ್ಲ. ವಿಗ್ರಹದಿಂದ ನನಗಾದ ಪರಿಣಾಮ "ಇಲ್ಲಿಯ ಜನರ ರಿಚಿ ಶಿಲ್ಪ ನಿರ್ಮಾಣ ವೈಖರ ಕಲಾವಿದನ ಆಯ್ಕೆ ಇತ್ಯಾದಿ ಶಿಲ್ಪದ ವಿಷಯಗಳ ಕುರಿತು ನಾವೇಕೆ ಹೀಗೆ ಮಾಡಬಾರದು! "ಎಂಬುದು.

ಮೂರು ದಿವಗಳ ಅನಂತರ ತಾಷ್ಕೆಂಟದಿಂದ ಲೆನಿನ ಗಾರ್ಡಗೆ ಹೊರಟೆವು ಸುಮಾರು ೩೬೦೦ಮೈಲಿಯ ಪ್ರಯಾಣ ನಾಲ್ಕು ತಾಸುಗಳಲ್ಲಿ ಮುಟ್ಟಿದೆವು. ಇದೊಂದು ವಿಶ್ವದಲ್ಲಿಯೇ ಸುಂದರವಾದ ನಗರ, ಪಟ್ಟಣದ ಮಧ್ಯೆ ನಿವಾ ನದಿ ೪೨ ಐಲೆಂಡ ೬೫ ಕಾಲುವೆಗಳನ್ನು ಹೊಂದಿದ ಈ ಪಟ್ಟಣ ಓಸ್ನೆಲೆ ಹೇಳದೆ ನೇರವಾಗಿ "ಹೆರ್ಮಿಟೆಜ" ಆರ್ಟ ಗ್ಯಾಲರಿ ಬಗ್ಗೆ ಹೇಳಬಯಸುತ್ತೇನೆ, ವಿಶ್ವದ ಅದ್ಭುತ ಆರ್ಟಗ್ಯಾಲರಿ, ೧೦೦೦ ಕೋಣೆಗಳಿಂದ ಹೊಂದಿದ ಈ ಗ್ಯಾಲರಿಯಲ್ಲಿ ೨.೫ ಮಿಲಿಯನ್ ಪೇಂಟಿಂಗ್ಸಗಳಿವೆ, ೬\೬, ಅಳತೆಯ ಚಿತ್ರದಿಂದ "೩೦\೩೦" ಅಳತೆಯ ಚಿತ್ರಗಳವರೆಗೆ ವಿಶ್ವದ ಖ್ಯಾತ ಕಲಾವಿದರ ಕೃತಿಗಳನ್ನು ಇಲ್ಲಿ ಕಾಣಬಹುದು, ರೂಬೆನ್ಸ, ರೆಂಬ್ರಾಂಟ ಖ್ಯಾತಚಿತ್ರಕಾರರ ಮೂಲ ಕೃತಿಗಳು ಇಲ್ಲಿ ನೋಡಲು ಸಿಗುತ್ತವೆ. ಇಲ್ಲಿಯ ಮೆಟ್ರೊ, ಪಾರ್ಕ, ಹಲವಾರು ನೋಡಿದೆವೂ.

ಅಲ್ಲಲ್ಲಿ ನಿಲ್ಲಿಸಿದ ಭವ್ಯವಾದ ಶಿಲ್ಪಗಳನ್ನು ನೋಡಿದಾಗ, ಮರೆಯದ ಮನೋಹರ ಶಿಲ್ಪಗಳು ಅಲ್ಲಿಯ ಗೈಡುಗಳು, ವಿವರಿಸುವ ರೀತಿ ಸ್ವಾಭಿಮಾನದಿಂದ ಕೊಡಿ ಅವರ ಕಳಕಳಿ ಮೆಚ್ಚುವಂತಹದು, ಲೆನಿನಗಾರ್ಡನ್ನು ಸುತ್ತಾಡುವಾಗ ರಸ್ತೆಗಳ ಪಕ್ಕದಲ್ಲಿ ಹರಿವ ನದಿಗಳನ್ನು ನೋಡುತ್ತ ಹೋದಂತೆ, ಅವರಲ್ಲಿಯ ಸ್ವಚ್ಚತೆ, ವೈವಿಧ್ಯಮಯವಾದ ಲೈಟುಗಳ ಜೋಡಣೆ, ವ್ಯವಸ್ಥಿತ ರಸ್ತೆಗಳಿಗೆ ನದಿಗೆ ಎರಡು ಭಾಗಕ್ಕೆ ಕಂಗೊಳಿಸುವ ಸೊಬಗಿನ ಶಿಲ್ಪಗಳು. ಯಾವುದನ್ನು ನೆನಪಿಡಲಿ ಅನ್ನುವ ಮಟ್ಟಿಗೆ ಸುಂದರ ಕಟ್ಟಡಗಳು ಮಧ್ಯೆತಿರುಗಾಡುವಾಗ ಆ ಸಂಸ್ಕೃತಿಯ ಹಿರಿಮೆಯನ್ನು ಸುಂದರ ಪರಂಪರೆಯನ್ನು ಬಂಗಾರದಿಂದ ಬರೆದಿಡಬೇಕು ಲೆನಿನಗಾರ್ಡದಿಂದ ಮಾಸ್ಕೋಕ್ಕೆ ರೈಲಿನಿಂದ ರಾತ್ರಿ ಬಂದೆವು. ಮಾಸ್ಕೊ ರಶಿಯಾದ ರಾಜಧಾನಿ. ೮ ಮಿಲಿಯನ್ ಜನಸಂಖ್ಯೆ ಉಳ್ಳ ಪಟ್ಟಣ ಉದ್ದಗಲು ೪೨ ಕಿ.ಮಿ. ಇಪ್ಪತ್ತು ಸುಂದರ ಟಾವರಗಳಿಂದ ಸೂಚಿಸುವ ನಗರ ಉದ್ಯಾನವನಗಳಿಂದ, ಸುಂದರವಾದ ನದಿಯ ಎರಡು ಕಡೆ ಪಟ್ಟಣವು ಸುಂದರವಾಗಿ ಬೆಳೆದು ನಿಂತಿವೆ. ೮೦೦ವರ್ಷಗಳ ಹಳೆಯ ಪಟ್ಟಣವಾಗಿದ್ದು ೧೯೧೮ ರಾಜಧಾನಿಯಾಗಿ ಮಾಡಲಾಗಿದೆ. ಇಲ್ಲಿನ ಸಮಾಲೀನ ಚಿತ್ರ ಸಮಗ್ರಹಾಲಯವು. ವಿಶ್ವದ ಖ್ಯಾತ ಸಂಗ್ರಹಾಲಯವಾದ ನ್ಯಾಷನಲ್ ಆರ್ಟ ಮ್ಯುಸಿಯಂ ಇಲ್ಲಿಯ ಜನರ ಸಾಂಸ್ಕೃತಿ ನಾಗರಿಕತೆ ಬೆಳೆದ್ದು ಬಂದರೀತಿಯನ್ನು ಅಭಿವ್ಯಕ್ತಗೊಳಿಸುತ್ತದೆ. ಅದರಂತೆ ಮಾಸ್ಕೊ ವಿಶ್ವವಿದ್ಯಾಲಯ ವ್ಯವಸ್ಥೆ ಅಷ್ಟೇ ವೈಜ್ಞಾನಿಕದ್ದಾಗಿದೆ. ಅಕ್ಟೋಬರ ಕ್ರಾಂತಿ ದಿನ ಆ ಪಟ್ಟಣವನ್ನು ನೋಡಿದ ನನ್ನ ಪುಣ್ಯೆ, ಕೆಂಪುಚೌಕದಲ್ಲಿ ಲೆನಿನ ಅವರ ಶರೀರ ದರ್ಶನ ಮನಸಿಗೆ ಒಂದು ಬಗೆಯ ಸಂದೇಶ ನೀಡಿತು ಗಂಭೀರ, ಶಾಂತಿ ಶಿಸ್ತುಗಳ ಸುಸಂಘಟಿತ ದೇಶವೆಂದನಿಸಿತು.

ಮಾಸ್ಕೊದಲ್ಲಿ ನಾನು ನೋಡಿದ ಸರ್ಕಸ್ ಆ ಕಲಾವಿದರ ಅಭಿನಯಗಳು ಪ್ರಭಾವ ಬೀರಿದವು. ಅದರಂತೆ ಕಲಾತ್ಮಕ ದೃಶ್ಯಗಳು ಬ್ಯಾಲೆ ನೃತ್ಯದಲ್ಲಿ ನನ್ನ ಮನಸ್ಸನ್ನು ಸೆರೆಹಿಡಿದವು. ಮುಂದೆ 'ಕಿವ್' ಪಟ್ಟಣದ ಮಧ್ಯೆ ಬೃಹತ್ ನದಿಯ ಎರಡು ದಡಗಳ ಮೇಲೆ ಅದು ಬೆಳೆದದ್ದು ನೋಡಿದೆ. ಕಿವನಲ್ಲಿ ಎರಡನೇ ಮಾಹಾಯುದ್ಧದ ಸ್ಮರಣಾರ್ಥವಾಗಿ ನಿರ್ಮಿಸಿದ ಶಿಲ್ಪ ಸ್ಮಾರಕಗಳು ಎಂಥವರಲ್ಲಿಯೂ ದೇಶಭಕ್ತಿ, ದೇಶದ ಪ್ರಜ್ಞೆಗಳನ್ನು ಮೂಡಿಸುತ್ತವೆ. ಅಲ್ಲಿ ೬೦ ಅಡಿ "ಭೂಮಿತಾಯಿ" ಯು ಖಡ್ಗವನ್ನು ಹಿಡಿದ ಶಿಲ್ಪ ಇಡೀ ಪಟ್ಟಣಕ್ಕೆ ಗೋಚರಿಸುವುದು ಅದ್ಭುತವಾದದ್ದು. ಹಳೆಯ ಕೋಟೆ ಹಳೆಯ ಕಟ್ಟಡಗಳ ಪುನಃ ನಿರ್ಮಾಣದ ಕಾರ್ಯ ನೋಡಿದಾಗ ಈ ಜನರ ದೇಶಭಕ್ತಿಯ ಇನ್ನೋಂದು ಬಗೆ. ಅವರು ತಮ್ಮ ದೇಶದ ಪರಂರೆಯನ್ನು ಕಾಪಾಡಲು ಶ್ರಮಿಸುತ್ತಿರುವ ರೀತಿ ಅಪಾರವಾದುದೆಂದು ತಿಳಿದುಬರುತ್ತದೆ. ಕಳೆದ ೨೦ ವರ್ಷಗಳಲ್ಲಿ ಇಡೀ ರಶಿಯಾದ ಎಲ್ಲಾ ಪುರಾತತ್ವ ಕಟ್ಟಡಗಳನ್ನು ಪುನಃ ನಿರ್ಮಾಣ, ಮಾಡಿದಲ್ಲದೆ ಅಷೇ ಸುಂದರವಾಗಿ ಕಾಪಾಡುವ ಕಾರ್ಯವನ್ನು ನಿರ್ವಹಿಸಿದ್ದಾರೆ. ರಶಿಯನ್ನರು ಬೆಳೆದು ಬಂದರೀತಿಯನ್ನು ನೋಡಿದರೆ ಬಹುಶಃ ಈ ಒಂದು ವೈವಿಧ್ಯಮಯ ಬೆಳವಣಿಗೆಯನ್ನು ನಮ್ಮ ದೇಶದಲ್ಲಿ ನಾವು ತರಬೇಕೆಂಬ ಭಾವನೆಗಳು ಮೂಡಿಬರುತ್ತವೆ.

## ೨. ಗಡ್ಡದ (ಅಂದಾನಿ)ವಂಶಾವಳಿ

ಅಪ್ಪಾಸಾಹೇಬ.ಗಡ್ಡದ
ಈರಮ್ಮಾ



## ೫. ವಕ್ತೃಗಳ ಸಂದರ್ಶನ

| ಕ್ರಮ.ಸಂ. | ಹೆಸರು | ವಯಸ್ಸು | ಸ್ಥಳ | ವೃತ್ತಿ |
|---|---|---|---|---|
| ೧ | ವ್ಹಿ.ಜಿ ಅಂದಾನಿ | ೬೭ | ಗುಲಬರ್ಗಾ | ಕಲಾವಿದರು |
| ೨ | ಬಸವರಾಜ.ಉಪ್ಪಿನ | ೬೩ | ಗುಲಬರ್ಗಾ | ಕಲಾವಿದರು |
| ೩ | ಎ.ಎಸ್ ಪಾಟೀಲ | ೭೩ | ಗುಲಬರ್ಗಾ | ಕಲಾವಿದರು |
| ೪ | ವಿಜಯ ಹಾಗರಗುಂಡಿಗಿ | ೪೭ | ಗುಲಬರ್ಗಾ | ಕಲಾವಿದರು |
| ೫ | ಅಯಾಜುದ್ದಿನ್.ಪಟೇಲ್ | ೪೫ | ಗುಲಬರ್ಗಾ | ಕಲಾವಿದರು |
| ೬ | ಡಾ.ಶಿವಾನಂದ.ಎಚ್ ಬಂಟನೂರ | ೪೭ | ಕ.ವಿ.ವಿ.ಹಂಪಿ | ಉಪನ್ಯಾಸಕರು |
| ೭ | ಡಾ.ಯಾದಪ್ಪ. ಪರದೇಶಿ | ೪೬ | ಬದಾಮಿ | ಉಪನ್ಯಾಸಕರು |
| ೬ | ಶರಣು.ಅಳ್ಳೊಳಿ | ೩೪ | ಮುಂಬಯಿ | ಕಲಾವಿದರು |
| ೭ | ಚಂದ್ರಹಾಸ.ವಾಯ್. ಜಾಲಿಹಾಳ | ೪೪ | ಗುಲಬರ್ಗಾ | ಉಪನ್ಯಾಸಕರು |
| ೮ | ಬಸವರಾಜ. ಜಾನೆ | ೫೭ | ಗುಲಬರ್ಗಾ | ಪ್ರಾಚಾರ್ಯರು |
| ೯ | ಹನಮಂತ. ಮಂತಟ್ಟಿ | ೪೨ | ಗುಲಬರ್ಗಾ | ಉಪನ್ಯಾಸಕರು |
| ೧೦ | ರಾಚಪ್ಪ.ಈರಪ್ಪ. ಹೂಗಾರ | ೮೨ | ಹೊನ್ನಕಿರಣಗಿ | ಹಿರಿಯರು |
| ೧೧ | ಅಂಜಣ್ಣ.ರಾ ಹೂಗಾರ | ೮೪ | ಹೊನ್ನಕಿರಣಗಿ | ಹಿರಿಯರು |
| ೧೨ | ಮಲ್ಲಪ್ಪ.ಗ ಯಳಸಂಗಿ | ೬೬ | ಹೊನ್ನಕಿರಣಗಿ | ಹಿರಿಯರು |
| ೧೩ | ಶರಣಪ್ಪ.ಗು ಯನಗುಂಡಿ | ೭೨ | ಹೊನ್ನಕಿರಣಗಿ | ಹಿರಿಯರು |
| ೧೩ | ಶಿವಶರಣಪ್ಪ. ಪಾಳೆ | ೫೮ | ಹೊನ್ನಕಿರಣಗಿ | ಹಿರಿಯರು |
| ೧೪ | ಮರೆಪ್ಪ. ಪೂಜಾರಿ | ೫೬ | ಹೊನ್ನಕಿರಣಗಿ | ಅರ್ಚಕರು |



ಗೂಳಿ ಚಿತ್ರ



ಗೂಳಿ ಚಿತ್ರ

## ಗೂಳಿ ಚಿತ್ರಗಳು









ನಿಸರ್ಗ ರೇಖಾಚಿತ್ರ



ಸಂವಾದ



ಸಂವಾದ

## ಭಾಗವಾನರ ಭಾವಚಿತ್ರಗಳು











ಸ್ಥೂಲ ಕಾಯದ ಮಹಿಳೆ 1993



ಸ್ಥೂಲ ಕಾಯದ ಮಹಿಳೆ



ವರ್ಣಶಿಲ್ಪಿ ವೆಂಕಟಪ್ಪ- ಪ್ರಶಸ್ತಿ-೨೦೦೯




ಉತ್ತಮ ಕಲಾ ಶಿಕ್ಷಕ ಪ್ರಶಸ್ತಿ-೨೦೦೭





* ಕರ್ನಾಟಕ ಲಲಿತಕಲಾ ಅಕಾಡಿಮಿ ಪ್ರಶಸ್ತಿ-೧೯೯೪

Lalit Kala Akademi
National Exhibition of Art
1992
National Academy Award

Sri V. G. Andani
is given this Award for outstanding exhibit
entitled Surrounding
entered into the 35th National Exhibition of Art
organised by the Lalit Kala Akademi at
New Delhi

Lalit Kala Akademi
National Exhibition of Art
1992
National Academy Award

3/3/92. V. G. Andani

ಕೇಂದ್ರ ಲಲಿತಕಲಾ ಅಕಡಾಮಿ ಕಲಾ ಪ್ರಶಸ್ತಿ -೧೯೯೨



ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು

ಗೌರವ ಪ್ರಶಸ್ತಿ 1994

ಶ್ರೀ/ಶ್ರೀಮತಿ ವಿ.ಜಿ.ಅಂದಾನಿ
ಅವರು ಕರ್ನಾಟಕ ಲಲಿತಕಲೆಯ
ಕ್ಷೇತ್ರದಲ್ಲಿ ಸಲ್ಲಿಸಿರುವ ಅಮೂಲ್ಯ
ಸೇವೆಗಾಗಿ ಕರ್ನಾಟಕ ಲಲಿತಕಲಾ
ಅಕಾಡೆಮಿಯ 19 ರ ಗೌರವ
ಪ್ರಶಸ್ತಿ ನೀಡಿದೆ.

ರಿಜಿಸ್ಟ್ರಾರ್ ಅಧ್ಯಕ್ಷರು

ಮುಖ್ಯ ಅತಿಥಿಗಳು

ದಿನಾಂಕ: 12-9-94

ಕರ್ನಾಟಕ ಲಲಿತಕಲಾ ಅಕಾಡೆಮಿ ಗೌರವ ಪ್ರಶಸ್ತಿ-೧೯೯೪



ಕರ್ನಾಟಕ ಸರ್ಕಾರ

ರಾಜ್ಯೋತ್ಸವ ಪ್ರಶಸ್ತಿ ೧೯೯೨

ಶ್ರೀ ವಿ.ಜಿ.ಅಂದಾನಿ

ಸನ್ಮಾನ್ಯರೆ,

ತಾವು ಚಿತ್ರಕಲಾ ಕ್ಷೇತ್ರದಲ್ಲಿ
ಸಲ್ಲಿಸಿರುವ ಅನುಪಮ ಸೇವೆಯನ್ನು
ಕೃತಜ್ಞತೆಯಿಂದ ಸ್ಮರಿಸುತ್ತ ಕರ್ನಾಟಕ ಸರ್ಕಾರವು
೧೯೯೨ ನೆಯ ಸಾಲಿನ ರಾಜ್ಯೋತ್ಸವ ಪ್ರಶಸ್ತಿಯನ್ನು
ತಮಗೆ ನೀಡಿ ಗೌರವಿಸಲು ಹರ್ಷಿಸುತ್ತದೆ.

ಫಿಲಿಪ್ಪೋಸ್ ಮಥಾಯ್
ಆಯುಕ್ತರು ಹಾಗೂ ಕಾರ್ಯದರ್ಶಿಗಳು
ವಾರ್ತೆ, ಪ್ರವಾಸೋದ್ಯಮ
ಹಾಗೂ ಯುವಜನ ಸೇವೆಗಳು

ಡಾ|| ಪಿ. ಎಸ್. ರಾಮಾನುಜಂ
ಆಯುಕ್ತರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ

ಬೆಂಗಳೂರು * ೧ ನವೆಂಬರ್ ೧೯೯೨

ರಾಜ್ಯೋತ್ಸವ ಪ್ರಶಸ್ತಿ-೧೯೯೨




ಗುಲಬರ್ಗಾ ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ್ ಪ್ರಶಸ್ತಿ ಪ್ರಧಾನ-೨೦೧೦

ಸಚಿವ ಗೋವಿಂದ ಕಾರಜೋಳ ಅವರಿಂದ 'ವರ್ಣಶಿಲ್ಪಿ ವೆಂಕಟಪ್ಪ' ಪ್ರಶಸ್ತಿ ಪ್ರಧಾನ- ೨೦೧೯



ರಷ್ಯಾ ಪ್ರವಾಸದ ಸಂದರ್ಭದಲ್ಲಿ ಅಂದಾನಿಯವರು



ಡಾ.ಹಾ.ಮಾ. ನಾಯಕರೊಂದಿಗೆ ಅಂದಾನಿಯವರು



Dr Andani V G Working in a Studio 2011



Dr. Andani V. G Reciving Nationa  Awared Central Lalit Kala Academy New Delhi - 1992






Karnataka Lalit Kala Academy Award Recieving from Virappa Molly at Bangalore 1981



ಕಲಾವಿದ ಎಂ.ಎ. ಚಟ್ಟಿಯವರೊಡನೆ ಶ್ರೀಯುತ ಅಂದಾನಿವರು



ಕಲಾವಿದ ಎಸ್.ಎಮ್. ಪಂಡಿತರೊಡನೆ ಶ್ರೀಯುತ ಅಂದಾನಿಯವರು



ಗಂಗುಬಾಯಿ ಹಾನಲ್‌ರೊಡನೆ ಶ್ರೀಯುತ ಅಂದಾನಿಯವರು



Dr. Andani V. G. with K. K. Hebbar at Camp 1986

R M Hadpd Dr Andani V G Kalidas pattar Janardan and other Artists at Banastali Vidya phit Jaypur 1970

With Devakinandan Sharma. Banstali



All India Artist Camp – Participant artists:
Kum. Sheela Goud (Bangalore), Sri Rajayya (A.P.), G.R. Santosh (Delhi),
Sri Shankar Palsikar, Art Critic (Bombay), Sri Vijay Sindhur (Bijapur),
Sri Andani V.G. (Gulbarga), Sri V.B. Hiregoudar ( Davangere) Staff & Student



ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡುತ್ತಿರುವ ಅಂದಾನಿಯವರು



ವಿದ್ಯಾರ್ಥಿಗಳಿಗೆ ಪ್ರಾತ್ಯಕ್ಷಿಕೆ ನಿಡುತ್ತಿರುವ ಅಂದಾನಿವರು (ಹಂಪಿ)



ಕಲಾವಿದರ ಜೊತೆ ಸಂದರ್ಶನ ಮಾಡುತ್ತಿರುವ ಸಂಶೋಧಕರು

# ಪತ್ರಿಕೆಗಳಲ್ಲಿ ಪ್ರಕಟವಾದ ಅಂಕಣಗಳು

## ಲಲಿತ ಕಲಾ ಅಕಾಡೆಮಿ ಸದಸ್ಯರಾಗಿ ಅಂದಾನಿ ನೇಮಕ

ಪ್ರಜಾವಾಣಿ 3-12-1982



ಬೆಂಗಳೂರು ೮– ಕರ್ನಾಟಕ ಲಲಿತಕಲಾ ಅಕಾಡೆಮಿಯು ಈಗ ೧೯೮೬ ರಿಂದ ಕೇಂದ್ರ ಲಲಿತಕಲಾ ಅಕಾಡೆಮಿಗೆ ಸ್ಥಳೀಯ ಕಾಲೇಜ ಆಫ್ ವಿಜ್ವಲ್ ಆರ್ಟ್ಸ ಪ್ರಾಚಾರ್ಯ ಶ್ರೀ ವಿ. ಜಿ. ಅಂದಾನಿ ಅವರನ್ನು ಆಯ್ಕೆ ಮಾಡಿದೆ ಎಂದು ಕರ್ನಾಟಕ ಲಲಿತಕಲಾ ಅಕಾಡೆಮಿಯ ರಜಿಸ್ಟ್ರಾರ ಅವರು ಪ್ರಕಟಿಸಿದ್ದಾರೆ.

ಈ ಸದಸ್ಯತ್ವದ ಅವಧಿಯು ಐದು ವರ್ಷದ್ದಾಗಿರುತ್ತದೆ. ಶ್ರೀ ಅಂದಾನಿ ಅವರು ಕಳೆದ ಎರಡು ದಶಕಗಳಿಂದ ಕರ್ನಾಟಕದ ಚಿತ್ರ ಕಲಾ ಕ್ಷೇತ್ರದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ತಾವು ಒಬ್ಬರೆ ಕಲಾವಿದರಾಗಿ ಬೆಳೆಯದೆ ವಿಭಾಗದಲ್ಲಿ ಕಲಾ ಮಹಾವಿದ್ಯಾಲಯದ ಮೂಲಕ ನೂರಾರು ಕಲಾವಿದರನ್ನು ಹೊರ ತಂದ ಶ್ರೇಯಸ್ಸು ಇವರದು.

SIX — SUNDAY HERALD

## ...f artists ...ntice

V. G. ANDANI

'Chakoli' (drawing)

## ART FOR THE WEEK

evening news of India June

## Fine graphics, paintings

Jun 1982.
Delhi — TRIVENI ART Galary.

THIS week, again the art galleries feature painters from outside Bombay and we have exhibitions by young artists based in Calcutta, Rajkot, Gulbarga and Pune, at the Jehangir and the Taj.

Hoshang D. P. Pavri, from Calcutta, and V. G. Andani, from Gulbarga, display their recent work at the southern wing of the Jehangir gallery.

Pavri reveals a "scholarly" approach in that one can recognise a serious vein in his prints, not merely because some of these can trace an Ajanta connection, but, in general, his exhibits carry an academic air and seek in depth the elements of form and the values of colour. Pavri makes use of resin blocks to cut his reliefs and in the large-sized compositions he employs, at times, four blocks to obtain his print in an enhanced scheme of formal relationship and play of colour.

In almost all the prints, one can easily appreciate the studied manner and the exactitude with which Pavri visualises his prints, valuing texture, line and form. For instance, the elephants in "Romping Around" carry the grace of line in majestic build-up, while, in the "Mongoose" Pavri presents the creature through dense colour in an effective manner.

Apart from the influence of Ajanta, Pavri seems a little undetermined in choosing his subjects for study. But, overall, he has a good grasp of the technique and a certain [illegible] in visualisation, which should stand him in good stead in the years ahead.

* * *

V. G. ANDANI, in his drawings, displays an equally commendable command over technique and a firm sense of discipline and approaches his work with earnestness and deep thought. Often [illegible] forms are presented in a suspended stance to heighten the impact. There are, too, several drawings that reflect a vaguely [illegible] feel and, on the whole, Andani seems to have a bias for construction, in the artistic sense.

These are not drawings seeking the [illegible] fun of pursuing the line but exercises to study balance, mass, texture and movement. Therefore, the [illegible] efforts [illegible] a [illegible] appreciation of compositional [illegible] ments.

It is to the credit of Andani that he is convincing in all his [illegible] and that the same approach [illegible] his exhibits to make one feel he is dedicated to his art.

* * *

AT the Taj, Suresh Raval and Chetan Joshi, from Rajkot, hold a joint exhibition and come together without apparent close links, for underlying their work is a quiet understanding of art.

Chetan Joshi attempts different approaches: the simplistic, the flamboyant and the decorative. He comes out best in the first category, for here only the essentials are portrayed and, in rendering a landscape thus, Chetan maintains a fine sense of composition. Elsewhere, the short strokes of the brush build up a fine rhythm, and, again, colour takes on an attractive gleam. One has a strong feeling that Chetan will find himself meaningfully if he pursues the path of capturing the essential, instead of chasing "ragas" and the like for inspiration.

Suresh Raval has entitled oils as also a series of watercolours — figurative [illegible] of moods. Everywhere Suresh Raval has a sun or moon as his signature, a point of emphasis and [illegible] of works [illegible] the forms harkening to machine parts in assemblage.

In the figurative studies, Suresh Raval brings in a monumental touch to the individual and, though the face is featureless, the entire frame of the body echoes to the depths of being. Both he and Chetan have, in the final analysis, to consolidate their findings and arrive at a set path for further progress.

The other wing of the Jehangir [illegible] from Pune. Unfortunately, the exhibits of all the four painters lack style and substance and remain inconsequential classroom exercises. One is aware that the painters will not understand their own drawbacks in such cases, and the communication gap is difficult to bridge where the divide is too vast.



Drawing by V. G. Andani

S.V.V.

ಮಂಗಳವಾರ, ಏಪ್ರಿಲ್ 11, 2000 ಕ್ರಾಂತಿ

## ಶೈಕ್ಷಣಿಕ ವಾತಾವರಣದ ಚಿತ್ರ ಅಗತ್ಯ: ಅಂದಾನಿ

ಕಲಬುರ್ಗಿ: ೩-೧೦- ಚಲನಚಿತ್ರಗಳು ಕೇವಲ ಮನರಂಜನೆಯ ಮಾಧ್ಯಮವಾಗದೆ, ಸಮಾಜದಲ್ಲಿ ಶೈಕ್ಷಣಿಕ ಮತ್ತು ಕಲಾತ್ಮಕ ವಾತಾವರಣ ಮೂಡಿಸಲು ನೆರವಾಗಬೇಕೆಂದು ಕರ್ನಾಟಕ ಲಲಿತಕಲಾ ಅಕಾಡೆಮಿಯ ಅಧ್ಯಕ್ಷ ವಿ.ಜಿ. ಅಂದಾನಿ ಕರೆ ನೀಡಿದರು.

ಇಂದು ನಗರದ ಸಂಗಮ ಚಿತ್ರಮಂದಿರದಲ್ಲಿ ವಾರ್ತಾ ಇಲಾಖೆ ಏರ್ಪಡಿಸಿರುವ ಪ್ರಶಸ್ತಿ ವಿಜೇತ ಚಲನಚಿತ್ರಗಳ ಚಿತ್ರೋತ್ಸವವನ್ನು ಉದ್ಘಾಟಿಸಿ ಮಾತನಾಡುತ್ತಿದ್ದ ಅವರು, ಕನ್ನಡ ಚಲನಚಿತ್ರ ಪರಂಪರೆ ತುಂಬಾ ಶ್ರೀಮಂತವಾಗಿದೆ. ರಾಷ್ಟ್ರದ ಅತ್ಯುನ್ನತ ಪ್ರಶಸ್ತಿ ಪಡೆದ ಪ್ರತಿಭಾವಂತರು ಕನ್ನಡದಲ್ಲಿ ಇದ್ದಾರೆಂದರು.

ಚಲನಚಿತ್ರಗಳು ಸಾಮಾಜಿಕ ಬದಲಾವಣೆ ನಿಟ್ಟಿನಲ್ಲಿ ಹೊಸ ಆಲೋಚನೆಗಳನ್ನು ಜನರಲ್ಲಿ ಮೂಡಿಸಬೇಕೆಂದು ಹೇಳಿದ ಅವರು, ಪ್ರಶಸ್ತಿ ವಿಜೇತ ಚಿತ್ರಗಳ ಚಿತ್ರೋತ್ಸವ ಏರ್ಪಡಿಸುವ ಮೂಲಕ ಉತ್ತಮ ಗುಣಮಟ್ಟದ ಚಿತ್ರಗಳನ್ನು ಉಚಿತವಾಗಿ ನೋಡುವ ಅವಕಾಶವನ್ನು ಸರ್ಕಾರ ಕಲ್ಪಿಸಿದ್ದು ಶ್ಲಾಘನೀಯ ಎಂದರು.

ಚಲನಚಿತ್ರಗಳಲ್ಲಿ ಹಿಂಸೆಯ ಬಗ್ಗೆ ಪ್ರಸ್ತಾಪಿಸಿದ ಅವರು, ಇದು ತುಂಬಾ ಪ್ರಭಾವಿ ಮಾಧ್ಯಮವಾಗಿದೆ. ಜನರ ಮೇಲೆ ಇದು ಹೆಚ್ಚು ಪರಿಣಾಮ ಬೀರುತ್ತದೆ. ಇಂತಹ ಮಾಧ್ಯಮ ಸಮಾಜದಲ್ಲಿ ಶಾಂತಿ ಸ್ಥಾಪನೆಗೆ ಪೂರಕವಾಗಿರಬೇಕೇ ಹೊರತು ಹಿಂಸೆಯ ಮನೋಭಾವವನ್ನು ಪ್ರಚೋದಿಸುವಂತೆ ಇರಬಾರದು ಎಂದರು.

ವಾರ್ತಾ ಇಲಾಖೆ ಜಂಟಿ ನಿರ್ದೇಶಕ ಅಪ್ಪಾರಾವ್ ಅಕ್ಕೋಣೆ ಅವರು ಮಾತನಾಡುತ್ತ ಪ್ರಶಸ್ತಿ ವಿಜೇತ ಚಿತ್ರಗಳನ್ನು ಹೆಚ್ಚು ಜನರು ವೀಕ್ಷಿಸುವಂತಾಗಲಿ. ಈ ರೀತಿಯ ಚಿತ್ರೋತ್ಸವವನ್ನು ಇಲಾಖೆಯ ವತಿಯಿಂದ ಏರ್ಪಡಿಸಲಾಗಿದೆ ಎಂದರು. ಜಿಲ್ಲಾ ವಾರ್ತಾಧಿಕಾರಿ ವಿ.ಆರ್. ಪ್ರಸಾದ್ ಸ್ವಾಗತಿಸಿ ಕಾರ್ಯಕ್ರಮ ನಿರ್ವಹಿಸಿದರು.

ಚಿತ್ರ ಕಲಾವಲಯದ ಅಂಬಾರಿ

## ನಮ್ಮ ಕಲಾವಿದರು

Six artists get Lalithakala award

Academy awards for Kere... Hegde, Ramachandre Gow...

Presentation ceremony to be held in September

## Art Appraisal

Hybrid togetherness

Classic pleasures

Hesitantly contemporary

Old-fashioned formalism

V G Andani's work

DECCAN HERALD

Monday November 10, 2008

## ಪತ್ರಿಕೆಗಳಲ್ಲಿ ಪ್ರಕಟವಾದ ಅಂಕಣಗಳು

March of Karnataka.
Dec 1992

Profile

GEETHA KUNTE

# Award Winning Spree

***Veeranna Andani, a talented painter from Gulburga has held many exhibitions of his works all over India. He has experimented widely in oil, colour and acrylic. He is also a teacher who has inspired many students to become able painters. His contribution to Karnataka art world is substantial***

Honna Kirangi located at a distance of 21 Kms. from Gulbarga has earned a name for agriculture, architectural and sculptural temples of the Jain and Shaiv tradition. The village on the high slope has grown densely with tall mansions provides a beautiful scene.

On the one side A.C.C.Cement factories emitting smoke from the chimneys and at the other far reaching black soil fields. In one of the prosperous agricultural families of the village, Veeranna Andani was born as the eleventh child of his parents Gurappa and Neelgangamma.

The pleasant surroundings of the village has indulged with rocky stones small and big, hedges, bushes and trees. Naturally soon after getting up from the bed, the child used to watch keenly the mixing of mud, the revolving wheel in the neighbouring potter's house for prolonged hours involving him in it physically also. Though physically lean he was bold and most intelligent among all the children, the boy was always busy with constructing mud houses, watching the agricultural activities. On the festive day like *Naga-Panchami, Karhunniva, Dasara* and *Deepavali*, he used to draw pictures of *serpents*, prepare mud oxes and decorate the walls with various colourful pictures.

In 1958 he was admitted for the fifth standard in Sri S.B.High School, Gulbarga. There too he proved to be a worthy and beloved pupil of all teachers and participated

V.G.Andani (extreme right) receives the National Award from Dr.Shankar Dayal Sharma, the then Vice President of India

22 March of Karnataka

...an - Delhi
...181.

कला August 9,15, 1981

## आधी दूरी से वापस

कर्नाटक के दो चित्रकारों—विजय सिंधुर और वीरण्णा अंदानी—के चित्रों की संयुक्त प्रदर्शनी पिछले दिनों श्रीधराणी गैलरी (नयी दिल्ली) में आयोजित हुई. दिल्ली में यह उन की पहली ही प्रदर्शनी थी. बंबई, हैदराबाद, बंगलूर आदि में वे एकाधिक प्रदर्शनियां कर चुके हैं. उन्होंने कई समूह प्रदर्शनियों में भी हिस्सा लिया है.

वीरण्णा अंदानी का एक चित्र

9-15 अगस्त '81

46

दिनमान

At Manglore-Camp.

THE HINDU, Friday, August 5, 1994 27

"Water everywhere not a drop in the tap" — by P. S. Punnachithaya

# A monsoon mela

When torrential rains hit the coastal Dakshina Kannada in the first half of July unmindful of the pounding waves of the Arabian Sea along the coast and the vagaries of the flash floods in the rivers that criss-cross, noted artists and a couple of budding poets came to Mangalore for a three-day camp.

The very spectacle of the monsoon's fury captured their imagination.

Drunk with imagination and spurred by the scene of devastation and human misery before them, the painters and the poets gave shape to the monsoon in all its glory, devastation and lustre.

They produced about 40 paintings — all water and acrylic — on the spot. Not to be outdone, the poets composed as many as six poems — either assuming or justifying the themes portrayed in the paintings.

"Varsha Vaibhav" was the title given to the congregation. In other words the "monsoon mela" included noted artists like V. G. Andani, Principal of the Ideal School of Art at Gulbarga, Mallappa Halli from Mysore, Babu Rao of Tumkur, Shom and Monappa, B. N. Acharya of Manipal, Raghavan of Kasargod, P. Karanth, Ganesh Somayaji, Sanjiva Shetty, Sharath Holla, Girija Yadav, Marlyn Pasquanah, Ana Pavange, K. V. Rao, Jayamala Jain and Nevidita.

Among the poets Dr. Sathyanarayana, Dr. Damodar Shetty, G. N. Mohan and Vaidehi were some of the noted ones. Kori Prasad Alva of the Prasad Art Gallery and Mr. K. R. Ramakrishna, the former Commissioner of the Mangalore Urban Development Authority (MUDA) — an art enthusiast provided all the facilities at the art camp.

It was jointly organised by the Artists Combine, the Prasad Art Gallery and Mahalsala School of Art.

An acrylic painting by an artist from Kasargod, P. S. Punnachithaya stood out. "Water, water every but not a drop in the tap" was the theme depicted.

A man rendered homeless in the flood fleeing — carrying all that he could salvage on his bicycle, was effectively rendered in oil by J. Ramesh Rao of Udupi.

The poets' compositions reflected the joys and miseries of the "Varsha vaibhava".

R. VIJAYA KUMAR

Land Scape
Demonstration
At
Koteswar Beach
Manglore
August-94

ಅನೆಯ ರಾಷ್ಟ್ರೀಯ ಕಲಾಮೇಳ

## ಕಲಾವಿದರ-ಕಲಾಭಿಮಾನಿಗಳ ಆಕರ್ಷಕ ಜಾತ್ರೆ



ಅಂದಾನಿಯವರ ಮನೆ (ಹೊನ್ನಕಿರಣಗಿ)



ಅಂದಾನಿಯವರ ಮನೆ (ಗುಲಬರ್ಗಾ)

